ಶ್ರೀರಸ್ತು.

ಶ್ರೀಲಕ್ಷ್ಮೀನಾರಾಯಣಾಯನಮಃ. 16.8.23.

8

# ಕಲ್ಯಾಣಗೀತಾವಳಿ

Kalyāṇagītāvali (Marriage Songs)




ಶ್ರೀಮನ್ಮಹಾರಾಜರವರ

ಅರಮನೇ ವಿದ್ವಾಂಸರಾದ ಜಯರಾಯಾಚಾರ್ಯರಿಂದ

ನೂತನವಾಗಿ ರಚಿಸಲ್ಪಟ್ಟಿತು.

Author – Jayaraya Acharya


Mysore

ಮೈಸೂರು:

ಆ॥ ಇ॥ ಜಗನ್ಮೋಹನ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

೧೮೮೬.

1886

16.6.23.

# ಪೀಠಿಕೆ.

ಚಿರಕಾಲದಿಂದಲೂ, ಬ್ರಾಹ್ಮಣರು, ಕ್ಷತ್ರಿಯರು, ಮೊದಲಾದ ನಾಲ್ಕು ವರ್ಣಾಶ್ರಮದ ಸ್ತ್ರೀಯರೂ, ತಂತಮ್ಮಲ್ಲಿ ನಡೆಯುವ ಮದುವೆ ಮೊದಲಾದ, ಸಕಲ ಶುಭ ಸಮಯಗಳಲ್ಲಿ, ಆಯಾಕಾಲೋಚಿತವಾಗಿ ಹೇಳುವದಕ್ಕೆ ಅನುಕೂಲವಾಗಿ ಪೂರ್ವದ ಜನಗಳು ಹಾಡುಗಳನ್ನು ಮಾಡಿರುತ್ತಾರೆ. ಆ ಕಾಲವನ್ನು ಮೊದಲುಮಾಡಿಕೊಂಡು ಇಲ್ಲಿನವರಿಗೂ ಅದೇಹಾಡುಗಳನ್ನೇ ಸ್ತ್ರೀಯರು ಆಯಾ ಸಮಯಗಳಲ್ಲಿ ಹೇಳುತ್ತಲಿರುವದು ಸರಿಯಷ್ಟೆ; ಆದರೆ, ಆ ಹಾಡುಗಳನ್ನು ಕ್ರಮವಾಗಿ ಒಬ್ಬರೇ ಮಾಡಿಲ್ಲ. ಕೆಲರು ಕೆಲ ಕೆಲವು ಹಾಡುಗಳನ್ನುಮಾತ್ರವೆ ಮಾಡಿರುತ್ತಾರೆ. ಆ ಹಾಡುಗಳು ಅತಿ ಮುಗ್ಧೆಯರಾಗಿದ್ದ, ಪೂರ್ವಕಾಲದ, ಹೆಂಗಸರ ಬಾಯಿಗೆ ಬಿದ್ದು, ಹಾಗೆಯೇ ಮುಗ್ಧಪರಂಪರಾ ಸಂಬಂಧದಿಂದ ಅವುಗಳ ರಾಗ, ತಾಳ, ಪ್ರಾಸ, ಅರ್ಥ, ಮೊದಲಾದವುಗಳೆಲ್ಲಾ ಕೆಟ್ಟು, ಕೇಳುವದಕ್ಕೆ ಅಸಹ್ಯಕರಗಳಾಗಿ ಇರುವವು. ಆದ್ದರಿಂದ, ವಿವೇಕಶಾಲಿನಿಯರಾಗಿಯೂ, ವಿದ್ಯಾವತಿಯರಾಗಿಯೂ, ನಾಗರಿಕತೆಯನ್ನು ಚೆನ್ನಾಗಿ ತಿಳಿದವರಾಗಿಯೂ, ಇರುವ, ಈಗಿನ ಬಾಲೆಯರಿಗೆ ಆ ಹಾಡುಗಳು ಅಭಿರುಚಿಸುವದಿಲ್ಲವಾದ್ದರಿಂದ ಮೈಸೂರು ಮಹಾರಾಜ್ಞೀ ಬಾಲಿಕಾ ಪಾಠಶಾಲೆಯ ಬಾಲೆಯರಿಗೂ, ತದಿತರ ವಿದ್ಯಾವತಿಯರಾದ ಸ್ತ್ರೀಯರಿಗೂ,

ಉಪಯೋಗವಾಗುವಂತೆಯೂ, ಮದುವೆಯನ್ನು ಮೊದಲು ಮಾಡಿಕೊಂಡು, ಸಕಲ ಕಲ್ಯಾಣ ಸಮಯಗಳಲ್ಲಿ ಹೇಳು ವದಕ್ಕೆ ಅನುಕೂಲವಾಗುವಂತೆಯೂ, ಹಾಡುಗಳನ್ನು ಹೊಸದಾಗಿ ಮಾಡಬೇಕೆಂದು, ಶ್ರೀಮನ್ಮಹಾರಾಜರವರ ದರ್ಬಾರ್ ಬಕ್ಷಿ ಮ|| ರಾ|| ನರಸಿಂಹೈಯ್ಯಂಗಾರರವರಿಂದ ಪ್ರೋತ್ಸಾಹಿತನಾಗಿ, ವಾಡಿಕೆಯಾಗಿ ಹೇಳತಕ್ಕ ರೀತಿಯನ್ನು ಅನುಸರಿಸಿ ಕಲ್ಯಾಣ "ಗೀತಾವಳಿ" ಎಂಬ ಈ ಗ್ರಂಥವನ್ನು ಹೊಸಕನ್ನಡ ಮಾತುಗಳಿಂದಲೇ, ರಾಗ, ತಾಳ, ಪ್ರಾಸ, ಅರ್ಥ, ಇವುಗಳಲ್ಲಿ ವ್ಯತ್ಯಾಸವಿಲ್ಲದಂತೆ, ನೂತನವಾಗಿ ವಿರಚಿಸಿ ಇರುತ್ತೇನೆ. ಈ ಗ್ರಂಥವನ್ನು ಆಮೂಲಾಗ್ರವಾಗಿ ಕೇಳಿ, ತಮ್ಮ ಅಭಿಪ್ರಾಯವನ್ನೂ ಹೇಳಿ, ವಿದ್ವಜ್ಜನರು ಮಾಡಿರುವ ಸಹಾಯಕ್ಕೆ ನಾನು ಕೃತಜ್ಞನಾಗಿರುತ್ತೇನೆ.

अ. वि. जयरायाचार्यः.

16·8·23.

ಶ್ರೀಲಕ್ಷ್ಮೀನಾರಾಯಣಾಯನಮಃ.

# ಕಲ್ಯಾಣಗೀತಾವಳಿ!

## ಶ್ರೀಚಾಮುಂಡೇಶ್ವರೀ ಪ್ರಾರ್ಥನೆ.

ರಾಗ—ಖರಹರಪ್ರಿಯ. (ಹಿಂದುಸ್ಥಾನಿ) ಆದಿತಾಳ.

ಪೊರೆ । ಚಾಮುಂಡೇಶ್ವರಿ ಬೇಗ ।
ವರ । ಚಾಮನೃಪೇಂದ್ರನನೀಗ ॥ ಪ ॥
ದುಷ್ಟರನ್ನು ಶಿಕ್ಷಿಸುತ್ತ । ಶಿಷ್ಟರನ್ನು ಪಾಲಿಸುತ್ತ ।
ತುಷ್ಟನಾಗಿ ಸಜ್ಜನರ । ಗಿಷ್ಟವನೀವನ ॥ ೧ ॥
ಪಾರಮುಖಾಶ್ರಿತ । ವಾರವ ಸಂತತ ।
ಮೀರಿ ಪಾಲಿಪನ । ಕಾರುಣ್ಯದಿ ॥ ೨ ॥
ಪುತ್ರಪಾರ ಸುಕ । ಳತ್ರ ಬಂಧು ಸ ।
ನ್ಮಿತ್ರ ಮಂತ್ರಿಯುತ । ಧಾತ್ರೀಶನ ॥ ೩ ॥

ಸಂಡಗೆಯ ಮುಹೂರ್ತ ಮಾಡುವ ಕಾಲದಲ್ಲಿ ಹೇಳುವದು.

ರಾಗ—ಶಂಕರಾಭರಣ. ರೂಪಕತಾಳ.

ಸುವ್ವಿ ರಾಮಚಂದ್ರ ಸುವ್ವಿ । ಸುವ್ವಾಲೆ ॥ ಪ ॥
ಶ್ರೀಗಣಾಧೀಶ ನಿನ್ನ । ನೀಗ ಪೂಜಿಸುವೆವು ಮುನ್ನ । ಬೇಗ
ನೆಮ್ಮ ಕಾರ್ಯಂಗ । ಳಾಗುವಂತೆ ವರವ ನೀಡು ॥ ೧ ॥ ಆದಿ
ಪೂಜ್ಯ ಗಣಪ ನಿನ್ನ । ಪಾದಯುಗವ ಪೂಜಿಸುತ್ತೆ ।

ಮೋದಕಗಳನೀವೆ ವರವ । ಹೇ ದಯಾಂಬುಧಿಯೆನೀಡು ।
॥ ೨ ॥ ಕಜ್ಜಕೆಡರುಬಾರದಂ । ತುಜ್ಜಗಿಸ್ಯೆಗುಜ್ಜಗಣಪ ।
ಸಜ್ಜಪ್ಪವಿತ್ತು ಪಂಚ । ಕಜ್ಜಾಯಗಳನು ಕೊಡುವೆ ॥೩॥
ಹೂರಿಗೆ ಹೂರಣದ ಕಡುಬು । ಹೇರಂಬ ಕೊಡುವೆ ನಿನಗೆ ॥
ಚಾರುಲಗ್ನಕ್ಕೆ ವಿಘ್ನ । ಬಾರದಂತೆ ವರವ ನೀಡು ॥ ೪ ॥
ಮಾರಹರ ಕುಮಾರ ವಿಘ್ನ । ವಾರ ತಿಮಿರ ಸೂರ್ಯನೆ
ಜಯ । ನಾರಸಿಂಹನರ್ಚನೆಯನು । ವಿಚಾರಿ ಮಾಳ್ಪವರವ
ನೀಡು ॥ ೫ ॥

ಇದೇ ಕಾಲದಲ್ಲಿ ಶ್ರೀವೈಷ್ಣವರಲ್ಲಿ ಹೇಳತಕ್ಕ ರೀತಿ.

ರಾಗ—ಶಂಕರಾಭರಣ. ಆದಿತಾಳ.

ಸುವ್ವಿ ರಾಮಚಂದ್ರ ಸುವ್ವಿ । ಸುವ್ವಾಲೆ ॥ ಪ ॥
ಶ್ರೀಕರ ಹಯವದನೆ ಸಕಲ । ಲೋಕ ವಂದ್ಯ ನಮಿಪೆ
ನಿನಗೆ । ಈ ಕಲ್ಯಾಣಕ್ಕೆ ಶುಭವ । ನೀಕರುಣಿಸು ದೇವ
ದೇವ ॥ ೧ ॥ ವೇದಾರ್ಥಗಳನು ಸರ್ವ । ಭೂದೇವ ತತಿಗೆ
ಪೇಳ । ಲಾದರದಿಂದದಾದಿಶೇ । ಷಾದಿ ಮಾವತಾರವಾಂತು ॥
॥ ೨ ॥ ಭೂಮಿಯೊಳವತರಿಸಿ ಪರ । ಸ್ತೋಮವ ನಿಗ್ರ
ಹಿಸಿ ಮೆರೆದ । ರಾಮಾನುಜಾರ್ಯರಂಘ್ರಿ । ತಾಮರಸಕೆ
ವಂದಿಸುವೆವು ॥ ೩ ॥ ಆದಿಪೂಜ್ಯವಿಷ್ವಕ್ಸೇನ । ಸಾದರದಿಂ
ದೀಗ ನಿನ್ನ । ಪಾದಯುಗವೆ ಪೂಜಿಸುವೆವು । ಮೋದದೆ
ಮಂಗಳವ ನೀಡು ॥ ೪ ॥ ಕಜ್ಜಕೆಡರು ಬಾರದಂ । ತುಜ್ಜ
ಗಿಸ್ಯೆ ಸರ್ವಪೂಜ್ಯ । ಸಜ್ಜಪ್ಪವಿತ್ತು ಪಂಚ । ಕಜ್ಜಾಯ

ಗಳನು ಕೊಡುವೆ ॥ ೫ ॥ ಹೂರಿಗೆ ಹೂರಣದ ಕಡುಬ । ಧೀರನೆ ನಿನಗರ್ಪಿಸುವೆವು । ಚಾರುಲಗ್ನಕ್ಕೆ ವಿಘ್ನ । ಬಾರದಂತೆ ವರವ ನೀಡು ॥ ೬ ॥ ಅಂತರಾಯಮಾದ್ರಿ ಶಂಬ । ಸಂತಸದೊಳು ಕೃಪಾಲಂಬ । ಸ್ವಾಂತವು ಜಯ ನೃಹರಿಯಲ್ಲಿ । ಸಂತತ ಮಿರುವಂತೆ ಮಾಡು ॥ ೭ ॥

ಗೋದುವೇ ಕಲ್ಲಿಡುವ ಕಾಲದಲ್ಲಿ ಹೇಳುವ ಹಾಡು.

ರಾಗ—ಮೋಹನ. ಆದಿತಾಳ.

ಜಯಬಾಲ ಗೋಪಾಲ । ಜಯ ನೀಲ ಘನನೀಲ । ಜಯ ಭಕ್ತತತಿ ಪಾಲ । ಜಯಸುಶೀಲ ॥ಪ॥ [* ಸಿರಿಯರಸನಡಿಗೆರಗಿ । ಕರಿವದನಗಭಿನಮಿಸಿ । ಸರಸತಿಯ ಸಂಸ್ಮರಿಸಿ । ಹರಿಸದಿಂದ ] ॥ ೧ ॥ ಇಂದಿರೇಶನ ಮದುವೆ । ಯಂದು ಗೋದುವೆಕಲ್ಲ । ಸುಂದರಿಯರಿಟ್ಟಿರವ । ನಿಂದು ಪೇಳ್ವೆ ॥೨॥ ಶ್ರೀರಮೆ ಬ್ರಹ್ಮಾಣಿ । ಭಾರತಿ ಸುಪರ್ಣಿ ಸತಿ । ಗೌರಿ ಮೊದಲಾದವರು । ಸೇರುತಲ್ಲಿ ॥ ೩ ॥ ಅಂದು ಗೋದುವೆ ಕಲ್ಲ । ಚಂದದಿಂದಿಡಲೆಂದು । ಮುಂದುವರಿದಾಡುತಿರೆ । ಸುಂದರಿಯರು ॥ ೪ ॥ ಮುತ್ತಿನಕ್ಷತೆಗಳನು । ಚಿತ್ತರದಿ ಕಲಸುತ್ತ । ಮತ್ತಕಾಶಿನಿ ಹರ್ಷ । ವೆತ್ತು ಮನದಿ ॥ ೫ ॥ ಬಟ್ಟಲೊಳು ತುಂಬುತ್ತ । ನೆಟ್ಟನಾವಕುಳಾಂಬೆ । ದಿಟ್ಟೆಯರಮುಂದೆತಂ।

---

*ಮೇಲಿನ ಬ್ರಾಕಿಟನಲ್ಲಿ ಇರುವ ಪದಕ್ಕೆ ಬದಲಾಗಿ [ಸಿರಿಯರಸನಡಿಗೆರಗಿ । ವರದ ವಿಷ್ವಕ್ಸೇನ । ಚರಣಸರಸಿಜಕೆರಗಿ । ಹರಿಸದಿಂದ ] ಈ ಪದವನ್ನು ಸೇರಿಸಿ ಶ್ರೀವೈಷ್ಣವರು ಹೇಳಬೇಕು.

ದಿಟ್ಟೆಳೆಂದು ‖ ೬ ‖ ಹೀರಹಾರಾದಿಗಳ । ನಾರಿಯರು ಧರಿಸುತ್ತ । ಸೇರಿ ಹೊರಟರು ಕೇರಿ । ಕೇರಿಗಳೊಳು ‖ ೭ ‖ ಕರೆಕರೆದು ವೃದ್ಧರಾ । ಗಿರುವ ಮುತ್ತೈದೆಯರ । ಮೆರೆದು ಬಂದವರನುಪ । ಚರಿಸುತಿರಲು ‖ ೮ ‖ ಮರಕತದ ಗೂಡೆಯೊಳು । ಭರದಿ ಗೋಧಿಯ ತುಂಬಿ । ಮೆರೆವ ಮಂಟಪದಿ ತಂ । ದಿರಿಸಲೊಲಿದು ‖ ೯ ‖ † [ಹಸೆಮಣೆಯಮೇಲೆಕೂ । ಡಿಸುತ ಬಿಸಜಾಕ್ಷನಂ । ಎಸೆವ ಗಣಪತಿಯ ಪೂ । ಜಿಸುತ ಮುದದಿಂ] ‖ ೧೦ ‖ ಸತಿಯರೀರೀರ್ವರೇ । ಜತೆಯಾಗಿ ಸೇರುತ್ತ । ಲತಿಶಯದಿ ಬೀಸಿದರು । ಕುತುಕದಿಂದ ‖ ೧೧ ‖ ನೆನೆದು ಜಯನರಹರಿಯ । ವನಜಪಾದವನಂದು । ವನಿತೆಯರು ಬೀಸಿದರು । ಅನುವನರಿತು ‖ ೧೨ ‖

ಅರಿಸಿನವನ್ನು ಕುಟ್ಟುವ ಶಾಸ್ತ್ರದ ಕಾಲದಲ್ಲಿ ಹೇಳುವದು.

ರಾಗ—ಮೋಹನ. ಅಟತಾಳ.

ಸುವ್ವಿ ಶ್ರೀಜಯಲಕ್ಷ್ಮೀ ನರಸಿಂಹ ದೇವಗೆ । ಸುವ್ವಾಲೆ ‖ ಪ ‖ ಸಾರವಾಳಿಯ ಸೀರೆಗಳನುಟ್ಟು । ಬಟ್ಟ । ತೋರಮುತ್ತಿನ ಹಾರಗಳನಾಂತು । ಹೀರದ ಸತ್ತಿಗೆಯ ನೆಳಲೊಳ್ಳೈತಹರಿಗೆ । ನಾರಿಯರ್ಕುಟ್ಟಿದರರಿಸಿನವನ್ನು ।

† ಮೇಲಿನ ಬ್ರಾಕೆಟ್ಟಿನಲ್ಲಿ ಇರುವ ಪದಕ್ಕೆ ಬದುಲಾಗಿ [ಮೆರೆವ ಮಂಟಪದಿ ಮಾ । ವರನನ್ನು ಕೂಡಿಸುತ । ವರದವಿಷ್ವಕ್ಸೇನ । ಗೆರಗಿ ಮುದದಿ ‖] ಈ ಪದವನ್ನು ಸೇರಿ ಶ್ರೀವೈಷ್ಣವರು ಹೇಳಿಕೊಳ್ಳಬಹುದು.

ಸುವ್ವಾಲೆ ॥ ೧ ॥ ಹಾರ ಪದಕ ಪಿಲ್ಲಿ ರುಳಿಗೆಜ್ಜೆ । ವಾಲೆ। ಹೀರಕಂಕಣಗಳ ಧರಿಸುತ್ತ । ವಾರಣಂಗಳನೇರಿ । ಸಾರಿ ಬರುವವರಿಗೆ । ನಾರಿಯರ್ಕುಟ್ಟಿದರರಿಸಿನವನ್ನು।ಸುವ್ವಾಲೆ ॥ ೨ ॥ ಅಂದುಗೆ ಗೊಂಡ್ಯ ರಾಗಟೆ ಬುಗಡಿ । ಕಡಗ । ಬಂದಿ ವಂಕಿಗಳನ್ನು ಧರಿಸುತ್ತ । ಆಂದೋಳದೊಳಗೈತರು ವಂಗನೆಯರಿಗೆ । ಚೆಂದದಿಕುಟ್ಟಿದರರಿಸಿನವನ್ನು। ಸುವ್ವಾಲೆ। ॥ ೩ ॥ ಹದನಾಗಿ ಜರತಾರಿಸೀರೆಯು । ನುಟ್ಟು । ಪದಪಿಂದೆ ಭೂಷಣಗಳನಿಟ್ಟು । ಕುದುರೆಯ ರಥದೊಳಗೈತರುವ ವರಿಗೆ । ಸುದತಿಯರ್ಕುಟ್ಟಿದರರಿಸಿನವನ್ನು।ಸುವ್ವಾಲೆ ॥೪॥ ಗಳದತುಂಬಲು ಕರಿಮಣಿಗಳ । ಕಟ್ಟಿ । ಕೊಳುತ ಮ ಕ್ಕಳನೊಡವೆರೆಯುತ । ಬಲುಬೇಗ ಬರುತಿರ್ಪವೈದಿಕಸತಿ ಯರ್ಗೆ । ಲಲನೆಯರ್ಕುಟ್ಟಿದರರಿಸಿನವನ್ನು । ಸುವ್ವಾಲೆ ॥೫॥

ಅರಿಸಿನವನ್ನು ಕುಟ್ಟುವ ಶಾಸ್ತ್ರವಾದಬಳಿಕ ವರನಿಗೆ ಆರತಿಯೆತ್ತತಕ್ಕಕಾಲದಲ್ಲಿ ಹೇಳುವದು.

ರಾಗ—ಕಾಂಭೋಜಿ. ಆದಿತಾಳೆ.

ತಾಮರಸಾಕ್ಷಗೆ । ಸೋಮಸಮಾಸ್ಯಗೇ । ವೈಮಾ ನಿಕನುತೆಗೋ । ಧಾಮಸದ್ಗುಣಗೇ ॥ ಚಾಮಭೂಮಿಾಂ ದ್ರಗೆ । ಕಾಮಿತಂಗಳನಿತ್ತು । ಪ್ರೇಮದಿ ಪಾಲಿಪಗೇ । ಸಾಮಜ ಪಾಲಗೇ । ಹೇಮದಾರತಿಯ ಬೆಳಗಿರೆ ॥ ೧ ॥ ಧರಿಸಿ ಪೀತಾಂಬರವ । ತರುಣತುಲಸೀದಳ । ಸರಕೌಸ್ತುಭ

ಗಳ | ಕೊರಳೊಳು ತಳೆದು ॥ ಮೆರೆವಗೆ ಶಂಖಚಕ್ರ | ವರ ದಾಭಯ ಕರ | ಸರಸಿಜ ಮಂಜುಲಗೇ | ಕರುಣಾಕರಗೇ ॥ ಮರಕತದಾರತೀಯ ಬೆಳ ॥ ೨ ॥ ಶ್ರೀರಮಣೀಮುಖ | ವಾರಿಜಾಹಸ್ಕರಗೇ | ಹಾರಾಲಂಕೃತವಿ | ಸ್ತಾರಹೃದಯಗೇ | ನಾರದಮುಖರಮುನಿ | ವಾರವಿನುತಪದ | ಸಾರಸಯುಗಜ॥ ಯ | ನಾರಸಿಂಹನಿಗೇ ॥ ಹೀರದಾರತಿ ॥ ೩ ॥

ಇದೇ ಕಾಲದಲ್ಲಿ ವಧುವಿಗೆ ಆರತಿಯೆತ್ತುವ ಹಾಡು.

ರಾಗ—ಕಾಂಭೋಜಿ. ಆದಿತಾಳ.

ಜರತಾರಿಯ ಸೀರೆಯ ನೆರಿಹಿಡಿದುಟ್ಟು | ಮಿರುಗಿನ ಕುಪ್ಪಸವ | ತರುಣೀಮಣಿಯಳು ಸರಿಮಾಡುತತೊಟ್ಟು | ರುಳಿಪೈಜಣಕಾಲುಂ | ಗುರಪಾಡಗ ಯಲೆಪಿಲ್ಲಿ ಗೆಜ್ಜೆಪಿಲ್ಲಿ | ಕಿರುಪಿಲ್ಲಿಯ ಸುತ್ತುಂ | ಗುರಗಗ್ಗರಗಳ ಧರಿಸುತಪದವಲ್ಲಿ | ಬರೆಯುತ ಲಲತಿಯನು ॥ ಮೆರೆಯುವ ವರಲಕ್ಷ್ಮಿಗೆ ಸುಗು ಣಾವಳಿಗೆ | ಶರಣರ ಪೊರೆವಳಿಗೇ ॥ ತರುಣಿಯರಾರತಿಯ ಬೆಳಗಿರೆ ॥ ೧ ॥ ತೊಳಗುವ ವರಮಣಿಪುಂಜಖಚಿತಗುಂಜ | ನ್ಮಂಜೀರೋಜ್ವಲ ಮೋ | ಬಲಿ ಕಾಂಚೀದಾಮಗಳನ್ನು ಧರಿ ಸುತ್ತ | ಜೋಮಾಲೆಯನೇಕಾ | ವಳಬಣ್ಣದ ಸರಸರಿಗೆ ಬ್ಯೈದೆ ತಾಳಿ | ಮೋಹನಸರಪದಕಾ | ವಳಿಗುಂಡಡ್ಡಿಕೆ ಕಟ್ಟಾಣಿಗಳನು ಪು | ತ್ತಳಿಕಾದ್ಸರಗಳ ॥ ಗಳದೊಳು ಧರಿಸುತ ರಂಜಿಸುವಿಂದಿರೆಗೇ | ಜಲರುಹಮಂದಿರೆಗೆ ॥ ಕಲಶ ದಾರತಿಯ ಬೆಳಗಿರೆ ॥೨॥ ಹರಡಿ ಕಡಗ ಕಂಕಣ ಹಿಂಬಳೆ

ದೋರ್‍ಯ । ಮುಪ್ಪಟ್ಟೆಯು ಚೋದ್ಯ । ಮೆರೆವ ಪೊಂಚಿ ಕೈ
ಕಟ್ಟು ಹಸ್ತಕಡಗ । ರತ್ನದವಂಕಿಯುಬಾ । ಪುರಿ ಗೊಂ
ಡೆಯ ತೋಳ್ಬಳೆ ಬಾಜೋಬಂದು । ನಾಗಮುರಿಗೆಗಳ
ಕರ । ಸರಸೀರುಹ ಯುಗಳದೆಧರಿಸುತ ಮೆರೆವುಂ । ಗುರ
ಗಳ ಬೆರಳುಗಳೊಳ್ ॥ ಧರಿಸಿ ಹರಿಯೊಡನೆ ಹಸೆಯೊಳು
ಮೆರೆವಳಿಗೇ । ಧರಸುಗುಣಾವಳಿಗೆ ॥ ಮರಕತದಾರತಿಯ
ಬೆಳಗಿರೆ ॥ ೩ ॥ ತಾಳುತ ಬೇಸರಿ ಮುಖರಬುಲಾಕುಗಳ ।
ನಾಸಿಕೆಯೊಳು ಕಿವಿಯೊಳ್ । ವಾಲೆಬುಗುಡಿ ಚಳತುಂಬು
ಚಂದ್ರಮುರುವಿಿಾಂ । ಬಾವುಲಿಸರ ಕುರುಡೀ । ಬಾಳೆಯ
ಹೊನ್ನೂ ಪಿಂಸರಪಳಿಗಳನು । ಧರಿಸುತ ಕನ್ನೆಗಳೊಳ್ ।
ಮೇಲಾಗಿಹ ಚೀಪರಿಸಿನವನುಪೂಸಿ । ಪನ್ನೀರೊಳು ತೊ
ಳೆದು ॥ ನೀಲದ ಹಸೆಮಣೆ ಯೊಳು ಕುಳಿತಿಹ ರಮೆಗೆ ।
ಕರುಣಾ ಸಂಭ್ರಮೆಗೇ । ನೀಲದಾರತಿಯ ಬೆಳಗಿರೆ ॥ ೪ ॥
ನೊಸಲಿನ ಮಧ್ಯದಿ ಮುತ್ತಿನ ಬಟ್ಟೆಸೆಯೆ । ಬೈತಲೆಯಿಕ್ಕೆ
ಲದೊಳು । ಮಿಸುಪ ಚಂದ್ರಸೂರ್‍ಯರ ಬಟ್ಟುಗಳ್ಮೆರೆಯೆ ।
ಸೀಮಂತದ ಬಟ್ಟು । ಮಿಸುನಿಯ ರಾಗಟೆ ನಾಗರ ಕೇದುಗೆ
ಗಳ್ । ಗೊಂಡೆಯ ತಿರುಪಿನಹೂ । ಪೊಸಹೆರಳಿನ ಬಂಗಾರ
ಚೌಲಿಕಟ್ಟು । ರಂಜಿಸುತಿರೆ ತಲೆಯೊಳ್ ॥ ಹಸೆಯೊಳು
ಜಯ ನರಹರಿಯ ನೆನೆದುಕುಳಿತಾ । ಬಿಸಜಾಕ್ಷಿಗೆನಗುತ ॥
ಮಿಸುನಿಯಾರತಿಯ ಬೆಳಗಿರೆ ॥ ೫ ॥

## ಎಣ್ಣೇ ಶಾಸ್ತ್ರಕ್ಕೆ ವರನನ್ನು ಹಸೆಗೆ ಕರೆಯುವ ಹಾಡು.

ರಾಗ.—ಮಧ್ಯಮಾವತಿ. ರೂಪಕತಾಳ.

ಸರಸಿಜನೇತ್ರನೇ । ಸುರನುತಿಪಾತ್ರನೇ ॥ ಪಲ್ಲ

ಸುರಾಸುರಾರ್ಚಿತಾಂಘ್ರಿಯೆ । ಕರುಣಾಕರ ಧೀರ ಹರಿಯೆ ॥ ॥ ಅ ॥ ದೇವದೇವೇಶರಾ । ಜೀವಪಾದಾಜ್ಞರ । ಪಾವನಾತ್ಮ ದೇವಪಾಲ । ಸೇವಿತಮುನಿವಾರಪಾಲ । ಕಾವನಪಿತ ಸದ್ಗುಣಯುತ । ಶ್ರೀವರ ಲೋಕೇಶವಿನುತ ॥ ಸರಸಿಜನೇತ್ರನೇ । ಸುರನುತಿ ಪಾತ್ರನೇ ಹಸೆಗೇಳು ॥ ೧ ॥ ಇಂದು ಸುಂದರ ವರ । ಮಂದಹಾಸಾಪರ । ವಂದಕ ಮುನಿವಾರಸುರಪ । ವೃಂದಚಿತ್ತ ಕಮಲಮಧುಪ । ಸುಂದರತರ ನಿಜಶರೀರ । ಮಂದರಧರ ಧೀರ ಶೂರ ॥ ಸರಸಿಜನೇತ್ರನೇ । ಸುರನುತಿ ಪಾತ್ರನೇ ಹಸೇಗೇಳು ॥ ೨ ॥ ವೈನತೇಯಧ್ವಜ । ಮೌನಿ ನಿರ್ಜರಕುಜ । ಭಾನುಸನ್ನಿಭಾಂಗರಂಗ । ದೀನಪಾಲ ಗೋಪಾಲ । ಜ್ಞಾನಿಗವ್ಯಸದಯನೆ ಜಯ । ಮಾನುಷಹರಿ ದಾನವಾರಿ ॥ ಸರಸಿಜ ನೇತ್ರನೆ । ಸುರನುತಿಪಾತ್ರನೇ ಹಸೆಗೇಳು ॥ ೩ ॥

## ಎಣ್ಣೇ ಶಾಸ್ತ್ರಕ್ಕೆ ಸ್ತ್ರೀಯನ್ನು ಹಸೆಗೆ ಕರೆಯುವ ಹಾಡು.

ರಾಗ.—ನಾಯಕಿ. ಮಿಶ್ರಛಾಪು.

ಶ್ರೀ ರುಚಿರಾಂಗಕಿ । ವಾರಿರುಹಾಂಬಕಿ । ಶ್ರೀರಂಗ ಪತಿನಾಯಕಿ ॥ ಶಾರದಶಶಿಹಾಸೆ । ಗೌರಚಂಪಾನಾಸೆ ।

ಚಾರುಭೂಷಣೆ ತರುಣಿ । ಶ್ರೀಗಮಣಿ ! ಹೀರದ ಹಸೆಗೆ ದಯಮಾಡು ॥ ೧ ॥ ಸರಿಗೆ ರಾಗಟೆ ಕುಂಚ್ಬು । ಸರಪಳಿರುಳಿ ಪಿಲ್ಲಿ । ಹೆರಳುಬಂಗಾರಸರ । ಮುರು ಹೊನ್ನೂ ವಾಲೆನೇ । ವುರಗಳ ಧರಿಸುತ್ತ । ಭರದಿ ಬಾರೆನ್ನುವರು । ತರುಣಿಯರು ॥ ಮರಕತದಹಸೆಗೆ ದಯಮಾಡು ॥ ೨ ॥ ಪಟ್ಟೆ ಸೀರೆಯ ನುಟ್ಟು । ತೊಟ್ಟು ಕುಪ್ಪುಸವನ್ನು । ದಿಟ್ಟಯ ಬಟ್ಟನಿಟ್ಟು । ಕಟ್ಟಾಣಿ ಮಣಿಗಳ । ಕಟ್ಟ ಜಯನೃಹರಿಯ । ಪಟ್ಟದರಸಿ ಸರಸಿ ।ಪುಟ್ಟಡಿ ಯಿರಿಸಿ ॥ ನೆಟ್ಟನೆಹಸಗೇ ದಯಮಾಡು ॥೩॥

### ಈಶ್ವರನನ್ನು ಹಸೆಗೆ ಕರೆಯುವ ಹಾಡು.

ರಾಗ,—ಹರಿಕಾಂಭೋಜಿ. ಆದಿತಾಳ.

ಶ್ರೀಮಹಿತವಿಭೋ । ಸೋಮೇಶ ಶ್ರೀ ॥ ಪಲ್ಲ ॥ ಕಾಮಿತದಾಮಿತ । ಭೂಮ ಭೀಮ ॥ ಅ ॥ ವ್ಯಾಳ ಸುಮಾಲಿಕ । ಶೈಲಜಾನಾಯಕ । ಬಾಲೇಂದುಭಾಸುರಾ । ಲೋಲ ಜಟಾಭರ । ಪಾಲನ ಪರವರ । ಶೀಲಪುರಹರ । ನೀಲಕಂಠಾಜರ । ಕಾಲವಿದಾರ ॥ ಶ್ರೀಮಹಿತ ವಿಭೋ । ಸೋಮೇಶ ಶ್ರೀ ॥ ಜಯಜಯ ॥ ೧ ॥ ರಾಜತಶೈಲ ಗೃ । ಹಾಜಿನಧಾರ । ರಾಜರಾಜಾಮರ । ರಾಜಮುಖೇಡಿತಾಂ । ಭೋಜಪಾದಾಗಮ । ರಾಜಿಗೇಯಾ । ವ್ಯಾಜ ಕೃಪೇಶಮ । ನೋಜಮಾರ ॥ ಶ್ರೀಮಹಿತವಿಭೋ । ಸೋಮೇಶ ಶ್ರೀ । ಜಯಜಯ ॥ ೨ ॥ ಪೂರಿತದೇವಮ । ನೋರಥಭೂರಥ । ಮೇರು ಪರ್ವತಚಾಪ । ಶೌರಿರೋಪ ।ಗೌರೀಧವತ್ರಿಪು । ರಾರಿಯೆ

ಶ್ರೀಜಯ ನಾರಸಿಂಹಾಘ್ರಿಸ । ರೋರುಹ ಭಕ್ತ ॥ ಶ್ರೀಮ
ಹಿತ ವಿಭೋ । ಸೋಮೇಶ ಶ್ರೀ ॥ ಜಯಜಯ ॥ ೩ ॥

ಪಾರ್ವತೀದೇವಿಯನ್ನು ಹಸೆಗೆ ಕರೆಯುವ ಹಾಡು.

ರಾಗ —ಮಣಿರಂಗು. ಮಿಶ್ರಛಾಪು.

ದೇವಿ ಭವಾನಿ । ದೈತ್ಯನಿಷೂದಿನಿ । ದೇವವಾರಪಾಲಿನಿ ॥ ಪಲ್ಲ ॥ ಪಾವನಾತ್ಮಮುನಿ । ಸೇವಿತೆ ಮಾತೆ । ಭಾವುಕದಾಯಿನಿ । ತೀವಿದಮುದದಿಂ ॥ ಬಾರೆಂದು ಹಸೆಗೆ ಕರದರು ॥ ೧ ॥ ಶ್ರೀಮಹಾಬಲ । ಶೈಲನಿವಾಸಿನಿ । ಕಾಮಿತಾರ್ಥದಾಯಿನಿ । ಕಾಮಹರಪ್ರಿಯ । ಕಾಮಿನಿ ಶ್ರೀಕರ । ಚಾಮನೃಪಾರ್ಚಿತ । ತಾಮರಸಾಂಘ್ರಿಯೆ ॥ ಹೇಮದಹಸೆಗೆ ದಯಮಾಡು ॥ ೧ ॥ ಬಾಲ ಸುಧಾಕರ । ಮೌಳಿ ಸುರಾವಳಿಪಾಲನೈಕನಿರತೆ । ಲೋಲಾಲಕಾಂಚಿತ । ಫಾಲೆ ಗಿರೀಶ್ವರ । ಬಾಲೆ ಮೆಲ್ಲಡಿಯಿಟ್ಟು । ಮೇಲಾದ ಮುದದಿಂ ॥ ನೀಲದ ಹಸೆಗೆ ದಯಮಾಡು ॥ ೨ ॥ ರಾಜರಾಜಾರ್ಚಿತೆ । ರಾಜರಾಜೇಶ್ವರಿ । ರಾಜೀವಾಯತಾಕ್ಷಿ । ರಾಜಸಮಾನನ । ರಾಜಿತೆ ಶಂಕರಿ । ಶ್ರೀಜಯಮಾನುಷಸಿಂಹನ ಸೋದರಿ ॥ ನಿಜವ ದಿಂದ ದಯಮಾಡು ॥ ೩ ॥

ಎಣ್ಣೇಶಾಸ್ತ್ರಕ್ಕೆ ಮೊದಲು ವರನಿಗೆ ಆರತಿಯೆತ್ತುವಹಾಡು.

ರಾಗ—ಬಿಲಾಹರಿ. ಆದಿತಾಳ.

ಸಿದ್ಧವೃಷಾದ್ರಿಯೊ | ಳ್ಬದ್ಧಾದರದಿಂ | ಸಿದ್ಧರ್ಗೆ ತಪ|
ಸ್ಸಿದ್ಧಿಯನೀಯುತ | ಸದ್ಧರ್ಮಂಗಳ | ನುದ್ಧರಿಸುವನಿಗೆ |
ಉದ್ಧವದಾರತಿಯ ಬೆಳಗಿರೆ ‖ ೧ ‖ ಅಂಜನಗಿರಿಯೊಳು |
ರಂಜಿಸುತಿರುವಾ | ಕಂಜಾಕ್ಷಗೆಗುಣ | ಪುಂಜಮನೋಜ್ಞಗೆ |
ಕಂಜೋದ್ಭವಹೃ | ತ್ಕಂಜಭ್ರಮರಗೆ | ಮಂಜುಲದಾರತಿ
ಯ ಬೆಳಗಿರೆ ‖ ೨ ‖ ಶೇಷಾಚಲಕುರು | ಭೂಷಣನಾದ |
ದೋಷದೂರಭಕ್ತ | ಪೋಷಣಪರಸಂ | ಭಾಷವಿಭೂಷಣ|
ಭೂಷಿತವೇಷಗೆ | ಯೋಷೆಯರಾರತಿಯ ಬೆಳಗಿರೆ ‖ ೩ ‖
ವೇಂಕಟಗಿರಿಯೊಳು | ಕಿಂಕರತತಿಯ | ಸಂಕಟಗಳ ನಿ |
ಶ್ಯಂಕೆಯೊಳ್ಮರಿವಾ | ಪಂಕಜನೇತ್ರಗೆ | ವೇಂಕಟರಮಣಗೆ |
ಕುಂಕುಮ ದಾರತೀಯ ಬೆಳಗಿರೆ ‖ ೪ ‖ ಆನತಸನ್ಮುನಿ |
ಮಾನಸತಿಮಿರಾ | ಜ್ಞಾನವಿನಾಶಕ | ಭಾನುವಿಗಧಿಕ | ದೀನ
ಪಾಲಜಯ | ಮಾನುಷಸಿಂಹಗೆ ‖ ಮಾಣಿಕದಾರತಿಯ
ಬೆಳಗಿರೆ ‖ ೫ ‖

ಎಣ್ಣೇಶಾಸ್ತ್ರಕ್ಕೆಮೊದಲು ವಧುವಿಗೆ ಆರತಿಯೆತ್ತುವಹಾಡು.

ರಾಗ—ಕಾಂಭೋಜಿ. ಆದಿತಾಳ.

ಕ್ಷೀರಜಲಧಿಸಂಭವೆಗೆ | ಸಾರಸಾಂಘ್ರಿವಿನತಾ ಭವೆಗೆ |
ಸಾರಕರುಣಾರಸಪೂರಿತೆಗೆ | ಚಾರುಗುಣಯುತೆಗೆ | ಧೀರಪ್ರ

ಲನ್ಯೈಕಮತಿಗೆ | ರಾರಾಜಮಾನಾಕೃತಿಗೆ | ಸಾರಭೂತಾನಂದ ಮತಿಗೆ ॥ ಸಾರಸನೇತ್ರನಾಸತಿಗೆ | ಹೀರದಾರತಿಯಬೆಳಗಿರೆ॥೧॥ ನೀಲವಾರಿದನಿಭಾ | ರಾಳಕುಂತಲಶೋಭಾ | ಶಾಲಿಬಾಲೇಂದುಸು ನಿ | ಟಾಲೆಗೆ ಮೌನಿ | ಜಾಲಾರ್ಚಿತಪಾದ | ನಾಳೀಕ ಯುಗಳದ | ಬಾಲೆಗೆ ಶ್ರೀಗುಣೆಗೆ | ನೀಲಾಯತೇಕ್ಷಣೆಗೇ | ನೀಲದಾರತಿಯಬೆಳಗಿರೆ ॥ ೨ ॥ ನಿರುಪಮಗುಣಮಣಿಗೆ | ಸರಸಿಜಪಾಣಿಗೆ | ಸುರುಚಿರವಾಣಿಗೆ | ಪರಮಕಲ್ಯಾಣಿಗೆ | ಸರಸಿಜಭವಮುಖ | ಪುರಹರಶತಮುಖ | ವರದಜಯನರ ಹರಿಯಾ | ತರುಣಿಮಣಿಗೀಪರಿಯಾ ॥ ಮರಕತದಾರತಿ ಯಬೆಳಗಿರೆ ॥ ೩ ॥

ವರನಿಗೆ ಆಶೀರ್ವಾದವನ್ನು ಮಾಡುವ ಹಾಡು.

ರಾಗ.—ಶಂಕರಾಭರಣ. ಆದಿತಾಳ.

ವೇದವೇದಾಂತ ಪುರಾಣಗಳ | ನೀ | ನೋದುತ ಗುರುಮುಖದಿಂ ದದರ | ಹಾದಿಯ ತಿಳಿಯುತ | ಭೇದವ ನರಿಯುತ | ವಾದಿಸಿ ಹರಿಜಗ | ದಾದಿಕಾರಣನೆಂದು | ಮೋದದಿ ತಿಳಿದು | ಸುಖಿಯಾಗು ॥ ೧ ॥ ಶೀಲವಂಶ ಮತಿ| ಯುತೆಯಾದ | ಅನು | ಕೂಲೆಯಾದ ಬಾಲೆಯ ವರಿಸಿ | ಬಾಲರ ಪಡೆಯುತ | ಲಾಲನೆಯೊಳೀ | ಲೋಲನಾಗಿ| ಗುಣ | ಶಾಲಿಯೆಂದೆನಿಸುತ | ಮೇಲಾದ ಸಿರಿಯಿಂ ಸುಖಿಯಾಗು ॥ ೨ ॥ ಮಾತಾಪಿತೃಗಳ ಸೇವೆಯನು | ಬಹು | ಕೌತುಕದಿಂದಲಿ ಮಾಡುತ್ತ | ಪ್ರೀತಿಯೊಳತಿಥಿ | ವ್ರಾತವ

ಪೂಜಿಸಿ | ನೀತಿವಂತನಾಗುತ ಚಿರಕಾಲಂ | ಖ್ಯಾತಿಯು ಪ
ಡೆದು || ಸುಖಿಯಾಗು || ೩ || ಬಾಗುತ ಗುರುಗಳ ಪದ
ಯುಗಕೆ | ಅನು | ರಾಗವ ಸಜ್ಜನರೊಳಗಿರಿಸಿ | ಆಗಮ
ಮಾರ್ಗವ | ಬೇಗದೆ ತಿಳಿಯುತ | ಹೋಗದೆ ದುರ್ಜನ
ಪೂಗಕೆ ವರಸುಖ | ಭೋಗಾಸ್ಪದನಾಗಿ || ಸುಖಿಯಾಗು ||೪||
ನಿರುಪಮ ಮತಿಯೊಳು ಗುರುವಾಗಿ | ನೀಂ | ಸಿರಿಯೊ
ಳು ಸುರಪಾಲಕನಾಗಿ | ವರರೂಪಿನೊಳಾ | ಸ್ಮರನಾಗುತ
ಜಯ | ನರಹರಿಪಾದಾಂ | ಬುರುಹವ ನೆನೆಯುತ | ಧರಣೀ
ಶನಾಗಿ | ಸುಖಿಯಾಗು || ೫ ||

## ವಧುವಿಗೆ ಆಶೀರ್ವಾದವನ್ನು ಮಾಡುವ ಹಾಡು.

ರಾಗ.—ನವರೋಜು.

ಆದಿತಾಳ.

ರಾಮಚಂದ್ರನಮುದದಿಂ | ಭೂಮಿನಂದನೆನೀನು |
ಪ್ರೇಮದೆ ಕೂಡುತ | ಕಾಮಾದಿಸುಖ | ಸ್ತೋಮವ
ಪೊಂದಿಸು | ಕ್ಷೇಮದೊಳನಿಶಂ | ಸುಖಿಯಾಗು || ೧ ||
ಸತಿಯೇ ನೀಂ ಕ್ಷಮೆಯಲ್ಲಿ | ಕ್ಷಿತಿಯನು ಪೋಲುತಲಿಲ್ಲಿ |
ಮತಿಯೊಳು ನೀಂಭಾ | ರತಿಯಾಗುತ ಪತಿ | ವ್ರತೆಯ
ರೊಳಗರುಂ | ಧತಿ ಯಂದೆನಿಸುತ | ಸುಖಿಯಾಗು || ೨ ||
ಶೀಲದೊಳಾ ಶೀಲೆಯನು | ಪೋಲುತ ಭೂಸುತೆ ನೀನು |
ಬಾಲರ ಪಡೆಯುತ | ಮೇಲಹ ವೈಭವ | ದೇಳಿಗೆಯೊಳು
ನೀಂ | ಬಾಳುತ ಬಾಲೇ | ಸುಖಿಯಾಗು || ೩ || ಪತಿಯ

ಪೂಜೆಯ ಮಾಳ್ಪ | ವ್ರತದೊಳು ನಾಳಾಯನಿಯಾ | ಗುತ
ಲನಸೂಯೆಯಂ ! ತತಿಶಯನೇವಾ | ರತಿಯಾಗುತ ಸಂ |
ತತವಿಾಧರೆಯೊಳ್ | ಸುಖಿಯಾಗು ॥ ೪ ॥ ಸಿರಿಯೊಳ
ಗಿಂದ್ರಾಣಿಯ ಧಿ | ಕ್ಕರಿಸುತಲಾ ಶಶಿತಾರಂ | ತರುಣಿಯೆ
ಬಾಳೌ | ಸುರುಚಿರ ಮತಿಯ ಜಯ | ನರಹರಿ ರಮಣಿ
ಯೆ | ವರಗುಣಮಣಿಯೇ | ಸುಖಿಯಾಗು ॥ ೫ ॥

### ವಧುವಿಗೆ ಆಶೀರ್ವಾದದ ಹಾಡು.

ರಾಗ.—ಭೈರವಿ. ರೂಪಕತಾಳ.

ಸುಖಶಾಲಿನಿಯಾಗು | ಸಖಿ ಶಶಿಸನ್ಮುಖಿಯೇನೀಂ |
ಅಖಿಲಾನಂದಶ್ರೀಪ್ರ ॥ ಮುಖವಂ ಪ್ರೊಂದುತ ಬಾಳೌ ॥ಪ॥
ಪತಿಪದ ಪಂಕಜಯುಗವಂ | ಸತತದೊಳಾರಾಧಿಸುತಂ |
ಹಿತಕರನಾಗಿಹ ಪತಿಯೇ | ಗತಿಗೆಸಹಾಯಕನೆನುತಂ |
ಮತಿಯೊಳು ನೀಂ ತಿಳಿಯುತ ವರ | ಸತಿಯರ ಸಂಗವ
ನನಿಶಂ | ಕೌತುಕಾಧಿಕ್ಯದೆ ಮಾಡುತ | ಕ್ಷಿತಿಯೊಳಗನು
ಗಾಲಂ ॥ ೧ ॥ ಗುರುಗಳ ಸೇವೆಯ ಪರಮಾ ! ದರದೊ
ಳು ಮಾಡುತ ಪತಿಯೇ | ಪರದೇವನೆನುತ್ತಲಿ ನೀಂ | ಪರಿ
ಭಾವಿಸಿ ಬುಧರಂ | ಹರಿಸದೆ ಪೂಜಿಸುತಂ ಸುತ | ವರರಂ
ಪಡೆಯುತ್ತಲಿ ಬಲು | ಸಿರಿಯಂಪ್ರೊಂದುತಸತತಂ | ಪರಮಾ
ನಂದದಿ ಸತಿಯೇ ॥ ೨ ॥ ಧನ ಕನಕಾಂಬರ ವರವಾ |
ಹನ ಗಜ ವಾಜಿ ಮುಖಶ್ರೀ | ಘನವಿಭವಾಪ್ತಿತೆಯಾಗುತ |

ಲನುಪಮ ಸುತಸದಿಂ । ವನರುಹ ಲೋಚನೆ ಬಾಂಧವ ।
ತನುಭವರಿಂದೊಡಗೂಡಿ । ವಿನುತ ಶ್ರೀ ಜಯನರಸಿಂ ।
ಹನ ಸತಿ ಜಾನಕಿ ಸತತಂ ॥ ೩ ॥

ವರನಿಗೆ ಎಣ್ಣೇಶಾಸ್ತ್ರ ಮಾಡುವಾಗ ಹೇಳುವಹಾಡು.

ರಾಗ.—ಶಂಕರಾಭರಣ. ಆದಿತಾಳ.

* [ಆ ಗಣನಾಯಕನನು ಭಜಿಸಿ । ವರ । ವಾಗೀಶ್ವರಿಯಂಘ್ರಿಗೆ ನಮಿಸಿ ] ಅನು । ರಾಗವ ಗುರುಹಿರಿಯರೊಳರಿಸಿ । ಶರ । ಣಾಗತಪಾಲಗಭ್ಯಂಗದ ಪದವನು । ಬೇಗದೊಳೇ ಹೇಳಿ । ಸತಿಯರು ॥ ೧ ॥ ಪ್ರತ್ನವಾಗಿಹ ಪೀಠವ ಹಾಕುತ । ನವ । ರತ್ನಮಯಾಸ್ತರಣವ ಹಾಸುತ । ಬಹು । ನೂತ್ನವಾಗಿಹ ಮಂಗಳವಸ್ತು । ಗಳ । ಯತ್ನದಿಂದಲಿ ತಂದಿರಿಸುತ ಕೂಡಿಸಿ । ರತ್ನಾಕರಜಾತಾಪತಿಯನ್ನು ॥ ೨ ॥ ನಲ್ಲೆಯರೆಲ್ಲ ರುಲ್ಲಾಸದೊಳು । ತಾ । ವಲ್ಲಿ ಹೇಳುತ ಮಂಗಳಪದವ । ಸಂ । ಫುಲ್ಲವಾಗಿಹ ಪೂವಿನೊಳದ್ದುತ । ಪೊಸ । ಮಲ್ಲಿಗೆ ಯೆಣ್ಣೆಯಹಚ್ಚಿದರಾ ಸಿರಿ । ನಲ್ಲನೆ ಮೌಳಿತಟದಲ್ಲಿ ॥ ೩ ॥ ಲೋಲಾಕ್ಷಿಯರಕ್ಷತೆಗಳನು । ಹರಿಯು । ಮೌಳಿಯ ಮೇಲೆ ಹಾಕುತ ಹರಸಿ । ಪೊಸ । ವೀಳಯವನು ಕೊಡುತಾರತಿಯ । ನೆತ್ತಿ । ಮೇಲಾಗಿಹ ಸಂಪಗೆ ಯೆಣ್ಣೆಯ ಶ್ರೀ । ಲೋಲನ ತಲೆಯೊಳ್ ।

*[ಆ ಗುರುರಾಮಾನುಜರಡಿಗೆ । ಶಿರವ। ಬಾಗಿಸಿವಿಷ್ವಕ್ಸೇನನಿಗೆರಗಿ]

ಸವರಿದರು ‖ ೮ ‖ ನಿಜಕರ ಕರಿಸಿನೆಣ್ಣೆಯ ಸವರಿ | ಕೊಂಡಂ | ಬುಜದಳ ಚಾರು ವಿಲೋಚನನ | ವರ | ಭುಜ ಯುಗಗಂಡಗಳೊಳು ಸವರಿ | ಮುದದಿ | ಭಜಕಜನರಪಾ ಲಿಪ ಜಯ ನೃಹರಿಗೆ | ದ್ವಿಜನಾರಿಯರಾಗ ಹರಸಿದರು ‖೯‖

## ಎಣ್ಣೇಶಾಸ್ತ್ರದ ಕಾಲದಲ್ಲಿ ಹೇಳತಕ್ಕ ಹಾಡು.

ರಾಗ.-ಕೇತಾರಗೌಳ. ಆದಿತಾಳ.

ಜಯ ಜಯ ನತಜನತಾ ಪರಿಪಾಲನೆ | ಜಯಜಯ ಬಾಲ ಗೋಪಾಲನೇ ‖ ಪ ‖ *[ ಹೇರಂಬನ ಪಾದ | ವಾರಿ ಜಕೆರಗುತ | ಶಾರದೆಯನು ಸಂಸ್ಮರಿಸುತ ] | ಶ್ರೀರಮಣಾ ಭ್ಯಂಗದಪರಿಯೊರೆವೆನು | ನಾರಿಯರೆಲ್ಲ ಶುಭವೆನ್ನಿರೆ ‖೧‖ ವೈಮಾನಿಕ ನಾರಿಯರ ವನೀಸುರ | ಕಾಮಿನಿಯರು ಮುನಿ ಸತಿಯರು| ಭೂಮಿಪರಸಿಯರುಕೂಡುತಕೃಷ್ಣನ| ಪ್ರೇಮ ದಿಂದ ಸಿಂಗರಿಸುತ ‖೨‖ ಕನಕದಪೀಠವಹಾಕುತದರಮೇಲೆ | ಮಿನುಗುವುಲಾರವಹಾಸುತ | ವನಜನೇತ್ರನ ಕುಳ್ಳಿರಿಸುತ ಹರ್ಷದೆ | ವನಿತಾವಳಿಶುಭವೆನ್ನುತ ‖ ೩ ‖ ಗುಂಪಾಗಿ ಕೂಡುತ ಕ್ಷತೆಗಳ ತಳಿದುಸಂ | ಪನ್ನನಾಗೇಂದು ಹರಿಗೆ ಹರ ಸುತ | ಕೆಂಪುಕೆತ್ತಿದ ಬಟ್ಟಲೊಳಿಟ್ಟಿರುವಾ | ಸಂಪಗೆಯೆಣ್ಣೆ

---

* [ ವಾಜಿಮುಖಾಂಘ್ರಿಪ | ಯೋಜಕೆವಂದಿಸಿ | ಮಾಜದೆವಿಷ್ವ ಕ್ಸೇನನ ಭಜಿಸಿ | ರಾಜೀವೇಕ್ಷಣ ಮಂಗಳಮಜ್ಜನದಿರವ | ಸಾಜದಿ ಪೇಳಿ ಶುಭವೆನ್ನಿರೆ ‖ ]

ಯ ಹಚ್ಚುತ ॥ ೪ ॥ ಅರಿಸಿನೆಣ್ಣೆಗಳನು ಸವರಿಕೊಳುತ ನಿಜ । ಕರಯುಗಕದನಾಶೌರಿಯು । ಚರಣಕರಾಬ್ಜಕಪೋಲ ಗಳೊಳುಸವರಿ । ಸ್ಮರಿಸುತಲಾಜಯನೃಹರಿಯು ॥ ೫ ॥

ವಧುವಿಗೆ ಎಣ್ಣೇಶಾಸ್ತ್ರ ಮಾಡುವ ಕಾಲದಲ್ಲಿ ಹೇಳುವದು.

ರಾಗ.—ಶಂಕರಾಭರಣ. ಆದಿತಾಳ

ಮಾಡಿದರ್ಶಾಸ್ತ್ರವ । ಕೂಡುತೆಸತಿಯರು ॥ ಪ ॥ ಹಾಡನುಹೇಳಿಕೊಂ । ಡಾಡುತಮುದದಿಂ ॥ ಅ ॥ ಹೇರಂಬ ನಪದ । ವಾರಿಜಕೆರಗುತೆ । ಶಾರದೆಯನುಮಿತಿ । ವಿಾರಿಭ ಜಿಸುತಲಿ ॥ ೧ ॥ ಮರಕತ ಪೀಠವ । ನಿರಿಸುತದರಮೇಲೆ । ತರುಣಿರುಕ್ಮಿಣಿಯು ಕು । ಳ್ಳಿರಿಸುತ ಮುದದಿಂ ॥ ೨ ॥ ಮಂಗಳಗಾನವ । ನಂಗನೆಯರು ಮಾಡಿ । ಅಂಗೈಯೊಳು ತೈಲ ।ಭೃಂಗಾರುವಪಿಡಿದು ॥ ೩ ॥ ಒಡನೆಸೀತೆಯಫಾಲ। ಕಿಡುತ ಕುಂಕುಮವನು । ಕೊಡುತ ವೀಳಯವನು । ಮಡದಿಗೆಹರಸುತ ॥ ೪ ॥ ನಾರಿಮಣಿಗೆಮುತ್ತಿ । ನಾರತಿ ಯೆತ್ತುತ । ಚಾರು ಸುಗಂಧಪ । ಟೀರದ ತೈಲದಿಂ ॥ ೫ ॥ ನೂತನಮಣಿಗಣ । ಸ್ಯೂತಭೃಂಗಾರುವ । ಪ್ರೀತಿಯಿಂಪಿ ಡಿಯುತ । ಕೇತಕೀ ತೈಲದಿಂ ॥ ೬ ॥ ಗಾನವ ಮಾ ಡುತ । ದೀನಪಾಲಜಯ । ಮಾನುಷ ಸಿಂಹನ । ಮಾನಿ ನಿಮಣಿಗೆ ॥ ೭ ॥

ಇದೂ ವಧುವಿಗೆ ಮಾಡುವ ಎಣ್ಣೇಶಾಸ್ತ್ರದ ಹಾಡು.

ರಾಗ—ಸಾರಂಗ. ಝಂಪತಾಳ.

ಮಾಡಿದರು ಶಾಸ್ತ್ರವನು । ಮಾನಿನಿಯರೆಲ್ಲರು । ಪಾಡುತ್ತ ಸಂತಸದೊಳು ॥ ಪ ॥ ಗಾಡಿಯಿಂದಾಸತಿಯು ಸಿಂಗರಿಸಿಬೇಗದಿಂ । ಕೂಡಿಸುತ್ತಲಿ ಹಸೆಯಮೇಲೆ ಕಮಲಾಕ್ಷಿಯರು ॥ ಅ ॥ ಹೇರಂಬಚಾರುಪದ । ವಾರಿಜಕೆವಂದಿಸುತ। ಶಾರದಾದೇವಿಯನು । ಸಾರಿಭಜಿಸಿ।ಪಾರನಾರಿಯರೆಲ್ಲ। ಸೇರುತೊಂದೆಡೆಯಲ್ಲಿ । ಚಾರುಗಾನವ ಮಾಡ । ಲಾರಂಭಿಸುತಿರೆ ॥೧॥ ಮಂಗಳಾಂಗಿಯರಾಗ । ಸಿಂಗರಿಸಿಕುಳಿತಿರುವ । ಭೃಂಗಾಳಕಾಂತೆಯಳ । ಮುಂಗಡೆಯೊಳು । ಮಂಗಳದ್ರವ್ಯಗಳ । ಪಿಂಗದೇತಂದಿರಿಸಿ । ಬಂಗಾರ ಬಟ್ಟಲನು । ಸಂಗೊಳಿಸುತ ॥ ೨ ॥ ಕಡುಸಂತಸದಿಪೂವ । ಮುಡಿಸಿಬಾಲೆಯಫಾಲ । ಕಿಡುತ ಕುಂಕುಮವನ್ನು । ಕೊಡುತ ವೀಳಯವ । ಷಡನಾರತಿಯನೆತ್ತಿ । ಮಡದಿಯರು ಹರಸುತ್ತ । ಪಿಡಿದಕ್ಷತೆಯನವಳ । ಮುಡಿಯಲ್ಲಿಹಾಕಿ ॥ ೩ ॥ ಕೆಂಪುಕೆತ್ತಿದ ಬಟ್ಟಲೊಳಗೆ ತುಂಬಿರುವ । ಸಂಪಗೆಯ ಯಣ್ಣೆಮಲ್ಲಿಗೆ ಯಣ್ಣೆಗಳೊಳು । ಗುಂಪಾಗಿಕಟ್ಟಿರುವ । ವರಸೂನಗಳನದ್ದಿ । ಸೊಂಪಿಂದಲಾ ಸತಿಯ ಮಸ್ತಕಕೆಸವರಿ ॥ ೪ ॥ ಕುವಲಯಾಕ್ಷಿಯರಿಂತು ಮೂರು ಭಾರಿಯು ಮಾಡಿ । ಸವರಿಕೊಳುತರಿಸಿನೆಣ್ಣೆಗಳ ನಿಜಕರಕೆ । ಯುವತಿಮಣಿಜಾನಕಿಯ ಕೆನ್ನೆ ಕೈಕಾಲ್ಗಳಿಗೆ । ಸವರುತ್ತ ಭಜಿಸುತ್ತ ಜಯ ಮನುಜಹರಿಯ ॥ ೫ ॥

## ದಂಪತಿಗಳಿಗೆ ಎಣ್ಣೇಶಾಸ್ತ್ರವನ್ನುಮಾಡುವಾಗಹೇಳುವದು.

ರಾಗ—ನಾದನಾಮಕ್ರಿಯ. ರೂಪಕತಾಳ.

*[ ವಂದಿಸುವೆನು ಶಾರದೆ ನಿನ್ನ । ಕೆಂದಾವರೆಯಂದದ ಪಾದ । ಕ್ಕಿಂದುಶೇಖರನನಂದನನಿಗೆ । ಚಂದದಿನಮಿಸುತಪೇಳುವೆಭೂ । ನಂದನೆ ರಾಮರಭ್ಯಂ । ಗದಪದವ ] ॥೧॥ ಕೂಡುತಲೊಂದೆಡೆಸತಿಯರು । ಹಾಡನುಹೇಳುತದಂಪತಿಗಳ । ಕೂಡಿಸುತಲಿಹಸೆಯಮಣೆಯಲ್ಲಿ ॥ ಪಾಡುತೆಕುಂಕುಮವನು ಹಚ್ಚುತ । ಗಾಡಿಕಾತಿಯರು ಸಂತೋಷದೊಳು ॥ ೨ ॥ ವೀಳಯಗಳನೀಯುತ್ತಲಿ । ಬಾಲೆಯರಕ್ಷತೆಗಳಮಾಳಿಯ । ಮೇಲೆಹಾಕುತ್ತಹರಸುತ ॥ ಹೇಳುತೆಮಂಗಳಕರಪದಗಳ । ಲೋಲಾಕ್ಷಿಯರಾರತಿಯನೆತ್ತಿ ॥೩॥ ಮಿಸುನಿಯ ಬಟ್ಟಲೊಳಿರುವಾ । ಪೊಸಮಲ್ಲಿಗೆಯೆಣ್ಣೆಯೊಳ್ಪರಿಮಳ । ಕುಸುಮವನದ್ದಿ ಶುಭವಾಗೆ ॥ ಹಸೆಮಣೆಮೇಲ್ಕುಳಿತಿಹ ದಂಪತಿಗಳ । ಮಿಸುಪಮಾಳಿಗಳೊಳ್ಸವರಿದರು ॥ ೪ ॥ ಶಂಪಾಂಗಕಿಯರು ಪೊಳೆಯುವ । ಕೆಂಪಿನ ಬಟ್ಟಲೊಳಗೆ ತುಂಬಿದ । ಸಂಪಗೆಯೆಣ್ಣೆಯನುಕೊಂಡು । ಸಂಪಗೆಯಸಳೊಳಗದ್ದುತ್ತಾ । ದಂಪತಿಗಳ ತಲೆಯೊಳ್ ಸವರಿದರು ॥ ೫ ॥ ಸವರುತಲೀಪರಿಯೊಳಗಾ । ಕುವಲಯ ಲೋಚನೆಯರು ಪಾಡುತ । ಭುವ

---

*[ಆನಮಿಸುತ ಹಯವದನಗೆ । ಮಾನಸದೊಳು ವಿಷ್ವಕ್ಸೇನನ । ಧ್ಯಾನಿಸುತಲಿ ಸೀತಾರಾಮಚಂದ್ರ । ರಾನವ ಮಜ್ಜನ ಶುಭಪದವ । ಸಾನುರಾಗದೊಳಗೊರೆವೆನು ॥ ]

ನಾಧಿಪನಾದಾ ಶ್ರೀಜಯಮಾ । ನವೆಸಿಂಹನಪಾದಾಂಬುಜ ವಂ । ತವಕದಿ ನೆನೆಯುತ್ತಿರ್ದರಾಗ ॥ ೬ ॥

ಮನೆನೀರೆರೆವಹಾಡು ( ಗಡಿಗೆನೀರು ) ( ಸಾಹಾವರ )

ರಾಗ—ಪೂರ್ವಿ. ತ್ರಿಪುಟತಾಳ.

ಐದು ಕಲಶಗಳೊಳ್ಳು । ತ್ರೈದೆಯರ್ನೀರನು । ನೋದದಿತುಂಬಿಪೂಮಾಲೆಯ ॥ ಮಾಲೆಯುಸುತ್ತುತ । ಸಾದರದಿಂದ ಪೂಜಿಸುತ ೧॥ ವನಿತೆಯರೈವರು । ಕನಕ ಕುಂಭಕವಪಿಡಿದು । ಮಿನುಗುವಾರತಿಯಬೆಳಗುತ್ತ । ಜನನಿ ಯೊಡನೆಕುಳಿತಾ । *[ ಮನುಜೇಂದ್ರ ರಾಮಗೆರೆದಾರು ] ॥ ೨ ॥ ಚಿನ್ನದಹಂಡೆಯೊಳು । ಪನ್ನೀರತುಂಬುತ । ಮುನ್ನಮೆ ಕಾಯಿಸಿದಾಜಲವ । ಜಲವನ್ನುಬೇಗದಿಂ । ಕನ್ನೆಯತೆರ್ೂೀಡಿ ಸರಿಮಾಡೆ ॥ ೩ ॥ ಬೆಳ್ಳಿಯಹಂಡೆಯೊಳು । ಬೆಳ್ಳೀನೀರನುತುಂಬಿ । ಗುಳ್ಳೆಬರುವಂತೆ ಮರಳಿಸಿ । ಮರಳಿಸಿದಾನೀರನು । ನಲ್ಲೆಯರೆಲ್ಲಾ ಹದಮಾಡಿ ॥ ೪ ॥ ಬೆರೆಸಿರುವಾನೀರನು । ಮೆರೆವತಂಬಿಗೆಯೊಳು । ಹರಿಸದೆತುಂಬಿಜಯನರ । ಹರಿರೂಪರಾಮ †[ ಗೆ । ತರುಣಿಯರೆಲ್ಲರೆರೆದರು] ॥ ೫ ॥

---

ಮೇಲಿರುವದಕ್ಕೆ ಬದಲಾಗಿ ಇವುಗಳನ್ನು ಸೇರಿಸಿದರೆ ಸ್ತ್ರೀಗೆ ಹೇಳುವದಕ್ಕೆ ಆಗುವದು.

*[ ಜನಕಾತ್ಮಜಾತೆಗೆರೆದರು ]

†[ ನ । ತರುಣಿಜಾನಕಿಗೆ ಎರೆದರು ]

ಇದಿರುಗೊಳ್ಳುವ ದಿವಸ ವರನನ್ನು ಹಸೆಗೆ ಕರೆಯುವ ಹಾಡು.

ಶ್ರೀರಾಗ. ತ್ರಿಪುಟತಾಳ.

ಸರಸಿಜದಳನೇತ್ರ | ಸುರನುತಿಪಾತ್ರ | ವರನೀಲ ಘನಗಾತ್ರ | ಕರಧೃತಗೋತ್ರ || ಪ || ಚರಣಪಂಕಜ | ಶರಣಜನತಾ | ಭರಣದಕ್ಷಿಣ | ಕರುಣಭವಸಂ | ತರಣ ಸುಜನಾ | ವರಣಹೃತದು | ಷ್ಕರಣರಚಿತಾ | ದರಣಸದ್ಗುಣ || ಸರಸಿಜದಳನೇತ್ರ || ಹಸೆಗೇಳು || ೧ || ಸುರುಚಿರಕನಕಾಂಬರ | ವರವನ್ನು ಧೀರ | ಧರಿಸಿ ಕಾಂಚಿಯದಾಮವ | ಸರಿಯುಸಗಿದೇವ | ಬೆರಳಿನುಂಗುರ | ವಿರದೆಮೆರೆಯು | ತ್ತಿರಲುಮುಕ್ತಾ | ಸರವಕೊರಳೊಳ | ಗಿರಿಸಿಕಾರ್ತ್ತಸ್ವರದ ಕಂಕಣ | ವರವತಳೆಯುತ | ಕರಯುಗಳದೊಳು |ಸರಸಿಜದಳನೇತ್ರ || ಹಸೆಗೇಳು || ೨ || ಸುಲಲಿತವನಮಾಲೆಯು | ಕಳಕಳಿಸುತಿರಲು | ತುಲಸೀಮಂಜರೀಹಾರವ | ಗಳದಲ್ಲಿ ಧರಿಸಿ|| ಲಲಿತಫಾಲಸ್ಥಲದಿಮೃಗಮದ | ತಿಲಕವರವನುತಳೆದು ಕರ್ಣಯು | ಗಳದಿಧರಿಸಿದಹೇಮಮಣಿಕುಂ | ಡಲವು ಬಲು ಥಳ | ಥಳಿಸೆಚಂದದಿ | ಸರಸಿಜದಳನೇತ್ರ || ಹಸೆಗೇಳು ೩ || ವಾರಿಧಿಜೆಯುರಂಜಿಸೆ | ಶ್ರೀರವ್ಯಮುಕ್ತಾ | ಹಾರವಲ್ಲಿವಿರಾಜಿಸೆ | ಚಾರುತರಂಪಹವಾ || ಯೂರಪಿಂಛಕ | ಹಾರಮುಕುಟಮಣಿ | ವಾರರಂಜಿತ | ಗೌರರುಚಿಕೋ | ಟೀರವರಕೇ | ಯೂರಗಳನಿಂ | ಧೀರತಳೆದುಮ್ಮೈ | ಯಾರದಿಂದಲಿ || ಸರಸಿಜದಳನೇತ್ರ ಹಸೆಗೇಳು | ೪ ||

ಸುರನಾರಿಯರುನರ್ತಿಸು । ತ್ತಿರಲಪೆಳಸರಿಯು । ಕರೆಯು ತ್ತಿರ್ಪರುಮುನಿ । ವರರೆಲ್ಲರೆತ್ತಿ ॥ ಕರವಜಯವೆಂದೊರೆಯು ತ್ತಿರ್ಪರು । ತರುಣಿಮಣಿಯರು । ಸರಸಗಾನವ । ವಿರಚಿಸು ವರೈ । ಕರಿವರದಜಯ । ನರಹರಿಯೆನೀಂ । ಕರುಣದಿಂದಲಿ ॥ ಸರಸಿಜದಳನೇತ್ರ ॥ ಹಸೆಗೇಳು ॥ ೫ ॥

ವರಪೂಜೆಯನ್ನು ಮಾಡತಕ್ಕ ಕಾಲದಲ್ಲಿ ಹೇಳುವ ಹಾಡು.

ರಾಗ—ಜಾಂಜೋಟಿ. ಆದಿತಾಳ.

ಪೂಜೆ ಮಾಡಿದನಾ । ರಾಜೇಂದ್ರನು । ವರ ॥ ಪ ॥

ರಾಜರಾಜನುತ । ರಾಜೀವನೇತ್ರನ ॥ ಅ ॥ ಭುವನೋದರನ ಸನ್ನಿಧಿಯಲ್ಲಿ । ತನ್ನ । ಯುವತಿಯೊಡನೆಕುಳಿತಾನೃಪನು । ವಿಪ್ರ । ನಿವಹಾನುಜ್ಞೆಯನಿಂತು ಕೇಳುತ್ತ । ಮೊಹೋ । ತ್ಸವದಿಂದ ಸಂಕಲ್ಪವಮಾಡುತ । ವರ ॥ ೧ ॥ ಕಲಶಂಗಳೊಳು ತುಂಬಿದಜಲವ । ತನ್ನ । ಲಲನೆಯುಹಾಕುತಿರಲುಹರಿಯ । ಲಲಿತಪಾದಾಬ್ಜವ ತೊಳೆಯುತ್ತ । ಆ । ಸಲಿಲವ ಹಾಕಿಕೊ ಳ್ಳುತ್ತತಲೆಯೊಳ್।ವರ ॥ ೨ ॥ ಪರಿಮಳ ಗಂಧವ ಪೂಸುತ್ತ । ಹರಿಯ । ಕೊರಳಲ್ಲಿಸುಮಹಾರವಹಾಕಿ । ಮೆರೆವಪೀತಾಂ ಬರವನುಕೊಡಲು । ತನ್ನ । ತರುಣೀಮಣಿಯುಕಾಡಿಗೆ ಯಿಡಲು।ವರ ॥ ೩ ॥ ಹೀರಹಾರವರಮಣಿಖಚಿತ । ಕೋಟೀ ರಾಂಗದಾಂಗುಲೀಯಕರತ್ನ । ಚಾರು ಕುಂಡಲ ಕಂಕಣಗಳ ನು । ಕೊಡಲು । ಧಾರಿಣೀದೇವಿಕುಂಕುಮವಿಡಲು। ವರ ॥೪॥

ಕಯೆಯುಗಳಿಕೆ ಗಂಧವ ಪೂಸೆ। ನೃಪ|ದಯಿತೆಯು ಜನಕ ನೃಪತಿ ಹೇವಾ । ನ್ವಯವನೀಯುತ ಸಂತಸದಿಂದಾ । ನತ| ಭಯಹಾರಿಶ್ರೀಜಯನರಹರಿಯು । ವರ ॥ ೫ ॥

ವರನಿಗೆ ಆರತಿಯೆತ್ತುವ ಕಾಲದಲ್ಲಿಹೇಳುವ ಹಾಡು.

ರಾಗ—ಶಂಕರಾಭರಣ. ಆದಿತಾಳ.

ಶ್ರೀರಮಾಕರಲೇಪಿತವರಘನ। ಸಾರಸುರಭಿತನುಗೆ। ಶಾರದ ನೀರದ। ಚಾರುಹಾಸ ಕರು। ಣಾರಸಾರ್ದ್ರಸರ। ಸೀರುಹನೇತ್ರಗೆ ॥ ಹೀರದಾರತಿಯಬೆಳಗಿರೆ ॥ ೧ ॥ ಅವನಿ ಯಭಾರವನಿಳುಹಲುತಾ । ನವತರಿಸಿರುವವಗೆ । ಯುವ ತೀಮಣಿಯರ । ಭವನದಿಲೂಟಿಯ । ಜವದಿಗೈವವಾ । ಧವನಿಗೆಹರ್ಷದಿ ॥ ಪವಳದಾರತಿಯಬೆಳಗಿರೆ ॥ ೨ ॥ ಸಚ್ಚಿ ದಾನಂದಗೆಜಯನರಹರಿ । ಗಿಚ್ಛೆಯಸಲಿಸುವಗೆ । ಅಚ್ಚರಿ ಯರುನೆರೆ । ದಚ್ಚರಿಪಡುತಲಿ । ನಚ್ಚಿಸುತಿರಲೀ । ಸಚ್ಚರಿ ತ್ರನಿಗೆ ॥ ಪಚ್ಚೆಯಾರತಿಯಬೆಳಗಿರೆ ॥ ೪ ॥

ವರನಿಗೆ ಆಶೀರ್ವಾದ ಮಾಡುವ ಕಾಲದಲ್ಲಿ ಹೇಳುವಹಾಡು.

ರಾಗ—ಕೇತಾರಗೌಳ. ರೂಪಕತಾಳ.

ಶ್ರೀಸರೋಜಾಭನೇತ್ರನೆಸತತಂ । ವಾಸವಾದಿಗೇಯ ವಿಜಯಿಸು ॥ ಪ ॥ ಆಸುದತೀರನ್ನೆಯನೀ । ನಾಸೆಯಿಂದ ಕೂಡುತಂ । ಭಾಸುರಗುಣ ಸೌಖ್ಯದಿಂ । ವಾಸುದೇವಪರ

ಮಾತ್ಮನೆ॥ ಶ್ರೀಸರೋಜಾಭನೇತ್ರನೆಸತತಂ|ಜಯಜಯ॥೧॥ ಮಂದಕಸನಸ್ಮಿನೀಶ | ವೃಂದೇಡಿತಪಾದಾರ | ವಿಂದನೆ ನೀ ನೈ ಸಿರಿಯಂ | ಪೊಂದಿ ಸದಾನಂದಿತನಾ | ಗಿಂದುಸಮಾನಾಸ್ಯನೆ | ಸುಂದರಮಂದಸ್ಮಿತಗೋ | ವಿಂದಾಶ್ರಿತಧರಾಮರಾ | ನಂದಾ ಕರಾ|ಮಿತವರಕರ॥ ಶ್ರೀಸರೋಜಾಭನೇತ್ರನೆಸತತಂ | ಜಯ ಜಯ ॥ ೨ ॥ ಸಂತತಿಯಂಪೊಂದುತ್ತಲಿ | ದಂತೀಂದ್ರಪಾಲ ಶ್ರೀ | ಕಾಂತನೆಗುಣಭೂಷಿತನೆ | ಚಿಂತಿತವರದಕ್ಷಮನೆ | ಸಂತತಸುಶ್ರೀದಯಾ | ಕ್ರಾಂತನೆನೀನಾಶಶಿಭಂ | ಕಂತೂಪ ಮಸುರೂಪನೆ | ಸಂತೋಷದೊಳ್ಜಯನರಹರಿ ॥ ಶ್ರೀಸರೋ ಜಾಭನೇತ್ರನೇಸತತಂ ॥ ಜಯಜಯ ॥ ೩ ॥

ಕನ್ನಿಕೆಯು ಗೌರೀಪೂಜೆಯನ್ನು ಮಾಡುವಾಗ ಹೇಳುವದು.

ರಾಗ.—ನಾದನಾಮಕ್ರಿಯ. ಮಿಶ್ರಛಾಪು.

ಮಂಗಳಾರತಿಯ ತಂದೆತ್ತಿರೆ | ಸರ್ವ | ಮಂಗಳೆ ಯನು ವರಗಳಬೇಡಿರೆ ॥ಪ॥ ಸುರಭಿಳಗಂಧ ಹರಿದ್ರಾ ಕುಂ ಕುಮಪುಷ್ಪ | ಪರಿಮಳಭರಿತಾಕ್ಷತೆಗಳಿಂದ | ವರದಾಯಿನಿ ಯಾದ | ಗಿರಿವರತನುಜೆಯ | ತರುಣಿಯರೆಲ್ಲರುಪೂಜೆಸುತ ॥ ೧ ॥ ಧೂಪನಿವೇದನ | ದೀಪಗಳಿಂದಲಿ | ಸೋಪಹಾರಫಲ ಭೇದದಿಂದ | ರೂಪಾನ್ವಿತೆಯಾ | ದಾ ಪಾರ್ವತಿಯ | ಚಾಪ ಲಾಕ್ಷಿಯರೆಲ್ಲಪೂಜೆಸುತ ॥ ೨ ॥ ತಾಂಬೂಲಧನಕನ | ಕಾಂ ಬರಮಣಿಸಿಕು | ರುಂಬಗಳಿಂದಂಬಿಕೆಯನ್ನು | ಮುಂಬರಿ

ದರ್ಶಿಸಿ । ಬಿಂಬಾಧರಿಯರು । ನಂಬಿಗೌರಿಯಪಾ । ದಾಂಬುಜವ ॥ ೩ ॥ ಪ್ರಮದೆಯರೆಲ್ಲರು । ಉಮೆಯಪದದ್ವಯ । ಕಮಲಕೆನಮಿಸುತಿಷ್ಟಾರ್ಥವನು । ಕ್ರಮವರಿಯುತಬೇಡಿ । ಸುಮಪೂರ್ಣಾಂಜಲಿಯನು । ಶಮನದಮನನರಸಿಗೆಪೂಜಿಸಿ ॥ ॥ ೪ ॥ ಸುರನರೋರಗಕಿಂ । ಪುರುಷಮುನೀಶ್ವರ । ವಿರಚಿತ ಪರಿಚರಣೆಗೆ ಶಿವೆಗೆ । ಸರಸಿಜಭವನುತ । ಚರಣಾಂಬುಜ ಜಯ । ನರಹರಿಕಿಂಕರಿಶಂಕರಿಗೆ ॥ ೫ ॥

## ಗೌರೀಸ್ತೋತ್ರದ ಹಾಡು.

ರಾಗ—ಸಾವೇರಿ. ಆದಿತಾಳ.

ಶ್ರೀಮಹಾಬಲ । ಶೈಲವಾಸಿನಿ । ಕಾಮಿತಫಲ ದಾಯಿನಿ ॥ ಪ ॥ ಚಾಮನೃಪಾರ್ಚಿತೆ । ಸೋಮವಿರಾಜಿತೆ । ವೈಮಾನಿಕನುತೆ । ಹೈಮವತಿಯೆಮಾತೆ ॥ ಶ್ರೀಮಹಾಬಲ ಶೈಲವಾಸಿನಿ ॥ ಜಯಜಯ ॥ ೧ ॥ ಸಾರಕೃಪಾಕರೆ । ಗೌರ ಶರೀರೆ । ಮಾರಾರಿಸುಂದರಿ । ಶೌರಿಸಹೋದರಿ ॥ ಶ್ರೀಮಹಾ ಬಲಶೈಲ ವಾಸಿನಿ ॥ ಜಯಜಯ ॥ ೨ ॥ ಪಾಲನಶೀಲೆ । ಲೋಲಕುಂತಲ ಜಾಲೆ । ಶೈಲೇಂದ್ರ ಬಾಲೆ । ಬಾಲೇಂದು ಫಾಲೆ ॥ ಶ್ರೀಮಹಾಬಲಶೈಲವಾಸಿನಿ ॥ ಜಯಜಯ ॥ ೩ ॥ ಚಂಡಮುಂಡಾಸುರ । ಮಂಡಲಖಂಡನ । ಪಂಡಿತನಿಜಭುಜ। ದಂಡಚಾಮುಂಡಿಕೆ ॥ ಶ್ರೀಮಹಾಬಲಶೈಲವಾಸಿನಿ ॥ ಜಯ ಜಯ ॥ ೪ ॥ ನೀರಜ ಲೋಚನೆ । ಗೌರಿಯೆ ಶ್ರೀಜಯ ನಾರಸಿಂಹಾಂಘ್ರಿಸ । ರೋರುಹಮಧುಕರಿ ॥ ಶ್ರೀಮಹಾಬಲ ಶೈಲವಾಸಿನಿ ॥ ಜಯಜಯ ॥ ೫ ॥

## ವರಪ್ರದಾನಾರ್ಥವಾಗಿ ಗೌರಿಯನ್ನು ಬೇಡುವ ಹಾಡು.

ರಾಗ—ಭೈರವಿ. ಮಿಶ್ರಛಾಪು.

ಕೋರುವೆನ್ನ ಭೀಷ್ಟವನೀಡು । ಕಾಪಾಡು ॥ ಪ ॥
ಸಾರಸನಿಭಪಾಣಿ । ಶರ್ವಾಣಿ ॥ ಅ ॥ ಮೇದಿನಿಯೊಳುಸ್ಥಿರ ।
ವಾಗುವಂತೆಮು । ತ್ತೈದೆತನವನೀಡು । ಕಾಪಾಡು ॥ ೧ ॥
ವೈಭವ ಸುತಧನ । ಕನಕಾಂಬರಗಳು । ಶೋಭಿಸುವಂದ
ದೊಳು । ಕೃಪಾಳು ॥ ೨ ॥ ಪತಿಯ ಪೂಜೆಯಸಂ । ತತ
ದೊಳು ಮಾಡುವ । ಮತಿಯ ನೀಯುತ ತಾಯೇ । ನೀ
ಕಾಯೆ ॥ ೩ ॥ ಸಾರಾನಂದವುಸ್ಥಿರ । ವಾಗಿರಲೆಂದು । ತಾರ
ಕಾರಿಯ ಜನನಿ । ಭವಾನಿ ॥ ೪ ॥ ಶ್ರೀಜಯನರಹರಿ ಭಕ್ತ
ಸಂಗವ ನೀಡು । ರಾಜಸುಂದರಮೌಳಿ । ಮಾಕಾಳಿ ॥ ೫ ॥

## ಇದೂ ವರಪ್ರಾರ್ಥನೆಯ ಹಾಡು.

ರಾಗ—ಕಲ್ಯಾಣಿ. ಮಿಶ್ರಛಾಪು.

ವರಗಳಕೊಡುಮಾತೆ। ಗಿರಿವರಜಾತೆ । ಸುರನರೋ
ರಗಗೀತೆ ॥ ಪ ॥ ಮರೆಯದೆನ್ನನುಕಾಯೆ । ಪರೆ ಮಾರ
ಹರಜಾಯೆ ॥ ಅ ॥ ಸುತತತಿಧನಕನಕ । ವಸ್ತುವನೇಕ । ವಿತತ
ವಾಹನಮೇನಕಾ । ಸುತೆ ಸಂತತಭಕ್ತ । ವ್ರತೆ ನತಮುನಿ
ಜಾತೆ । ಪತಿಯಪೂಜೆಯಮಾಳ್ಪ। ಮತಿಯೆಮೊದಲಾದಂಥಾ
॥ ೧ ॥ ಅವನಿಯೊಳೆನ್ನುನ್ನತ । ಮುತ್ತೈದೆತ । ನವು ಸ್ಥಿರ
ವಾಗುವಂತೆ । ನವವರಗಳಕೊಡು । ಕುವಲಯಲೋಚನೆ ।
ಭವದೀಯಪದಪಂಕ । ಜವನುಪೂಜಿಸುವಂತೆ ॥ ೨ ॥

ಸರಸಿಜಸಮಪಾಣಿ । ಪರಮೇಶನ । ತರುಣಿಪನ್ನಗವೇಣಿ ।
ಸುರನತಪದಪರಾ । ತ್ಪರಜಯನರಹರಿಯು । ಚರಣದಲ್ಲಿಯೆ
ಮನವು । ಸ್ಥಿರವಾಗಿನಿಲುವಂತೆ ॥ ೩ ॥

ಸಮಾವರ್ತನೆಯಾದ ಬಳಿಕ ಕನ್ಯಾದಾನಕ್ಕೆ ಮೊದಲು
ವರಪೂಜೆಯನ್ನು ಮಾಡುವಾಗ ಹೇಳುವ ಹಾಡು.

ರಾಗ—ಭೈರವಿ. ರೂಪಕತಾಳ.

ವರಪೂಜೆಯಮಾಡಿದನು। ರಾಜೇಂದ್ರನುಹರ್ಷದೇಮಾ
॥ ಪ ॥ ತರುಣೀಮಣಿಯೊಡನಾಗಲೆ । ವಿರಚಿಸುತಲಿಸಂಕಲ್ಪವ
॥ ಅ ॥ ಹೀರದಗಿಂಡಿಯೊಳ್ತುಂಬಿದ । ನೀರಿಗೆಬೆರಸುತ್ತಲಿಕ ।
ಸ್ತೂರೀಮುಖ ಪರಿಮಳಗಳ । ನಾರಿಯು ಹಾಕುತಿರೆ ॥
ಶ್ರೀರಾಮನ ಪಾದಾಬ್ಜವ । ಸಾರಾನಂದದಿ ತೊಳೆಯುತ ।
ಗೌರಾಂಬರದಿಂದೊರಸುತ । ಮಾರಿದಸಂತಸಮಾನುತ ॥ ೧ ॥
ಅಸರಸೀರುಹನಯನನ । ಭಾಸುರಕಂಠಕೆಗಂಧವ । ಪೂಸು
ತಪರಿಮಳ ಪಟ । ವಾಸವ ನೆರಚುತಲಿ ॥ ವಾಸಿತಪರಿಮಳ
ಭಾಸುರ । ಕೌಸುಮ ಹಾರಾವಳಿಯನು । ವಾಸುದೇವಗೆ
ಹಾಕುತ । ವಾಸೋವರಗಳನೀಯುತ ॥ ೨ ॥ ಅನುಪಮ
ಮಣಿಕುಂಡಲಯುಗ । ಕನಕಾಂಬರ ಕೋಟೀರಗ । ಳನು
ನೀಡುತಲಾನಂದದಿ । ಧನವಾಹನಗಳನೂ ॥ ಮನದೊಳಗಾ
ಜಯನರಹರಿ । ಯನು ಸಂಸ್ಮರಿಸುತ ತನ್ನಯ । ವನಿತಾ
ಮಣಿಯನುಕೊಡುತ । ಲನುವಿಂದಾಜನಕೇಂದ್ರನು ॥ ೩ ॥

## ಇದೂ ವರಪೂಜೆಯ ಹಾಡು.

ರಾಗ—ಜಂಜೋಟಿ. ಆದಿತಾಳ.

ಪೂಜೆಯಮಾಡಿದನು । ಶ್ರೀವರ ॥ ಪ ॥ ಸೋಜಿಗದಿಂದಾ । ರಾಜನಂದಾ । ರಾಜವದನಾಂ । ಭೋಜನೇತ್ರನ ॥ ಅ ॥ ಭುವನೋದರನೆಡೆಯೊಳ್ । ತನ್ನಯ । ಯುವತಿಯನೊಡವೆರೆದು । ತ್ರಿವಿಧಿಕುಳಿತಾ । ಭುವನಪತಿಯು । ಜವದಿಸಂಕಲ್ಪವನುಮಾಡಿ ॥ ೧ ॥ ಕಲಶದಿತುಂಬಿರುವ । ಸಲಿಲವ । ಲಲನೆಯುಹಾಕುತಿರೆ । ವಲಿದುಹರಿಯ । ಜಲಜಪಾದಂ । ಗಳನುತೊಳೆಯು । ತ್ತೊಲುಮೆಯಿಂದ ॥ ೨ ॥ ಪರಿಮಳಗಂಧವನು । ಪೂಸುತ । ಕೊರಳೊಳು ಸುಮಹಾರೋ । ತ್ಕರವ ಹಾಕಿ । ಮೆರೆವ ಪೀತಾಂ । ಬರವ ನಿತ್ತು । ಹರಿಸವೆತ್ತು ॥ ೩ ॥ ಹೀರಹಾರವಾರ । ವರಕೋ । ಟೀರಾಂಗದರುಚಿರಾ । ಪಾರವಲಯೋ । ದಾರಭೂಷಾ । ವಾರಗಳನಾ । ಶೌರಿಗಿತ್ತು ॥ ೪ ॥ ದಯಿತೆಯನೊಡವೆರೆದು । ವರಗೋ । ದ್ವಯವಕೊಡುತಲೊಲಿದು । ಜಯದ ಕರುಣಾ । ಶಯಸುಜನತಾ । ಭಯಹರಶ್ರೀ । ಜಯನೃಹರಿಯು ॥ ೫ ॥

## ಕನ್ಯಾದಾನವನ್ನು ಮಾಡುವಾಗ ಹೇಳುವ ಹಾಡು.

ರಾಗ—ಮಧ್ಯಮಾವತಿ. ಆದಿತಾಳ.

ದಾನವಮಾಡಿದನು । ವಮಾಸಿತಕನ್ಯಾ ॥ ಪ ॥ ಸಾರಪರೀಮಳ । ಭಾರಭೂಸುರ ಘನ । ಸಾರ ಗಂಧವಪೂಸಿ । ವಾರಿಜನಾಭಗೆ ॥ ೧ ॥ ಮಿಸಲಾಗಿಕಟ್ಟಿದಾ । ಭಾಸುರಪರಿ

ಮಳ | ಕೌಸುಮಹಾರವ | ವಾಸುದೇವಗೆಹಾಕಿ | | ೧ || ಮಂಗಳಾಷ್ಟಕವನು | ತ್ತುಂಗವೆನಲು ಬುಧ || ಪುಂಗವರೊರೆಯಲಾ | ಮಂಗಳಮೂರ್ತಿಗೆ || ೩ || ಭೇರಿ ನಗಾರಿತು | ತ್ತೂರಿ ಕಹಳೆಗಳು | ಸೇರುತಂಕಣದೊಳು | ಭೋರೆಂದು ಮೊರೆಯಲು || ೪ || ಕೂಡುತೆ ಸತಿಯರು | ಹಾಡನುಹೇಳಿಕೊಂ | ಡಾಡುತಿರಲುಕ್ಕೈಯಂ | ನೀಡುತಭೂಪನು || ೫ || ಎಡದಕಂಕುಳೊಳಗಾ | ಕೊಡುಗೂಸನೆತ್ತಿ ಕೊಂಡು | ಪಿಡಿದಿರ್ಪಜೀರಕಾ | ಗುಡಗಳನೆರಚಿಸಿ || ೬ || ಶ್ರೀಲೋಲಪಾಣಿಯು | ಮೇಲೆಮಗಳಕರವ | ಮೇಲಾಗಿರಿಸಿ ತನ್ನ | ಲೋಲಾಕ್ಷಿಯೊಡನೆ || ೭ || ದಾನಾಂಬುಧಾರೆಯು | ಮಾನಿನಿ ಯೆರೆಯಲು | ದೀನಪಾಲ ಜಯ | ಮಾನುಷ ಸಿಂಹಗೆ || ೮ ||

ಅರುಂಧತೀಪೂಜೆಯನ್ನು ಮಾಡುವಾಗ ಹೇಳುವ ಹಾಡು.

ರಾಗ—ಶಹನ. ತ್ರಿಪುಟತಾಳ.

ಪೂಜಿಸಿದಳರುಂಧತಿಯು | ರಾಜೀವಲೋಚನೆ || ಪ || ಸಾಜದಿಂದಂಗಳದಸಿಲ್ಲಿಸಿ | ರಾಜಮುಖಿಯರು ತೋರೆ ನಭವನು || ಅ || ಕೂಡಿದಂಗನೆಯರೊಲಿದು | ಅರುಂಧತಿಯು | ನೋಡುನೋಡೆನಲಂದು | ಬೇಡುತಾಗವಸಿಷ್ಠಸತಿಯನು | ಮಾಡಿನಮನವಕಂಡೆನೆನ್ನುತ || ೧ || ಅರಿಸಿನ ಕುಂಕುಮಗಳಿಂ | ಪರಿಪರಿಯಪೂವಿಂ | ವರಫಲಭರಗಳಿಂದ | ಮೆರೆವ ಮಂತ್ರಾಕ್ಷತೆಗಳಿಂದಲು | ಗುರು ವಸಿಷ್ಠರ ಸತಿಯು ಕುತು

ಕದೆ ॥ ೨ ॥ ವರಪುತ್ರಸೌಭಾಗ್ಯ । ಮಾಂಗಲ್ಯವು । ಸ್ಥಿರ ವಾಗಿಇರುವಂತೆ । ವರವಕರುಣಿಸೆನುತ್ತನಮೆನವ । ವಿರಚಿ ಸುತಜಯನೃಹರಿಯರಸಿಯು ॥ ೩ ॥

ಉರಟಣೀಕಾಲದಲ್ಲಿ ವರನನ್ನು ಹಸೆಗೆಕರೆದ ಹಾಡು.

ರಾಗ—ಯದುಕುಲಕಾಂಭೋಜಿ. ತ್ರಿಪುಟತಾಳ.

ಜಯ ಭಕ್ತಾವನಾತಂದ್ರ । ಜಯತು ಕರುಣಾ ಸಾಂದ್ರ । ಜಯದೇವದೇವೇಂದ್ರ ॥ ಪ ॥ ಜಯಪಾಲಿತೇಭೇಂ ದ್ರ । ಜಯಭೋಶ್ರೀರಾಮಚಂದ್ರ ॥ ಬಾರೆಂದು ಹಸೆಗೆ ಕರೆ ದರು ॥ ಅ ॥ ಅಸುರಬಾಧೆಯನೇಸ್ಯೆ । ರಿಸದೇಸಿರ್ಜರರೆಲ್ಲ । ಬಿಸಜ ಸಂಭವನೆಡೆಯೊಳ್ । ಬಸವಳಿದು ದೂರಿ ॥ ವಿಸುಪ ಶಾಲ್ಗಡ । ಲಸರಿಸಕೆ ಬಂ । ದಸುರ ಬಾಧೆಯ । ನುಸುರಲ ಮರರು ॥ ವಿಸುನಿಯು ಹಸೆಗೆ ದಯಮಾಡು ॥ ೧ ॥ ಜನ ನಾಥ ದಶರಥ । ತನುಜ ನಾಗುದಿಸುತ್ತ । ಅನಘಾ ಘಂದವ ತೋರುತ । ಮುನಿ ಮಖವ ಪೊರೆದು ॥ ಮನಸಿಜಾರಿಯ ಧನುವಭಂಜಿಸಿ । ವನಿತೆ ಸೀತೆಯ ವರಿಸಿಮೆರೆದಾ ॥ ನುನು ವಂಶೇಂದ್ರನೆ ಹಸೆಗೆ ದಯಮಾಡು ॥ ೨ ॥ ವನದೊಳ್ಸೀತಾ ಕೃತಿಯು । ದನುಜನಪರಿಹರಿಸಿದುದಂ । ಹನುಮಂತನಿಂ ತಿಳಿ ದು । ವನಧಿಯನು ಕಟ್ಟಿಸಿ ॥ ದನುಜನನು ಕೊಂ । ದನಘ ನಿಜಪ । ತ್ತನವ ನಾಳಿದ । ಮನುಜ ಸಿಂಹನೆ ॥ ಕನಕದ ಹಸೆಗೇ ದಯಮಾಡು ॥ ೩ ॥

## ಉರಟಣೀಕಾಲದಲ್ಲಿ ವಧುವನ್ನು ಹಸೆಗೆಕರೆವ ಹಾಡು.

ರಾಗ— ಮೋಹನ. ತ್ರಿಪುಟತಾಳ.

ಶ್ರೀರಮಣನಪಾದ | ವಾರಿಜಕಭಿನಮಿಸಿ | ಶಾರದೆ ಯಂಘ್ರಿಸ | ರೋರುಹಕೆರಗಿ ‖ ಬಾರೆಂದುಕರೆವರು | ಪಾರ ನಾರಿಯರೆಲ್ಲ ‖ ಶ್ರೀರಮಾ ದೇವಿಯೆ | ಸಾರಸನೇತ್ರಿಯೆ | ಹೀರದಹಸೆಗೆ ದಯುಮಾಡು |ಪಲ್ಲ‖ ಉತ್ತಮಾಸ್ತರಣವ | ಬಿತ್ತರದಿಂ ಹಾಸಿ | ಕುತ್ತನಿ ದಿಂಬನು | ವತ್ತಿನೊಳಿರಿಸಿ ‖ ನುತ್ತ ರಂಗವಲ್ಲಿಯು | ಸುತ್ತಲು ಹಾಕುತ | ಮತ್ತ ಕಾಶಿನೀ ಮಣಿಯು | ಚಿತ್ತಜಜನನಿಯು ‖ ಮುತ್ತಿನಹಸೆಗೆಕರೆದರು ‖ ೧ ‖ ಮೇಲಾಗಿರುವದೀಪ | ಮಾಲೆಯಜಗುಲಿಯು | ಮೇಲು ಗಡೆಯೊಳ್ಸಾಲು | ಸಾಲಾಗಿ ಇಡುತ ‖ ಬಾಲಕಿಯರು ಕೂಡಿ | ಹೇಳುತ್ತ ಹಾಡನು | ಕೋಲಾಹಲದಿಂ ಕರೆವ | ರ್ಲ್ಲೋಲಾಲಕಾಂತೆಯೆ ‖ ನೀಲದಹಸೆಗೆದಯುಮಾಡು ‖ ೨ ‖ ಅರಿಸಿನಕುಂಕುಮ | ಮರುಗಮಲ್ಲಿಗೆಜಾಜಿ | ಸುರಗೀ ಪ್ರಾ ದಟ್ಟೆಯು | ಸರಿಸದೊಳಿಡುತ ‖ ತರುಣೀಮಣಿಯೆ ನಿನ್ನ ಕರೆಯುತ್ತಲಿರುವರು | ಪರಮಪೂರುಷಜಯು | ನರಹರಿ ಕಾಂತೆಯೆ ‖ ವರರತ್ನದಹಸೆಗೆದಯುಮಾಡು ‖ ೩ ‖

## ಇದೂ ವಧುವನ್ನು ಹಸೆಗೆಕರೆಯುವ ಹಾಡು.

ರಾಗ—ತೋಡಿ. ಆದಿತಾಳ.

ಶ್ರೀಕರಕರುಣಾ ಧುನಿ | ಲೋಕಾನೇಕವ | ಸಾಕು ವಲೋಕಜನನಿ | ಪಾಕಾರಿನುತಚರಿತೆ | ಶೋಕಾಪನೋದ

ನೈಕನಿರತೆವನಾತೆ ॥ ಪ ॥ ಕೋಕನದಾಂಘ್ರಿಯೆ । ಲೋಕಪ ವಿನುತೆಯೆ । ಕೋಕಿಲಗಾನೆಸು । ಧಾಕರವದನೆ ॥ ಶ್ರೀಕರ ಕರುಣಾಧುನಿ ॥ ಹಸೆಗೇಳು ॥ ಅ ॥ ಭಾರತಿರತಿಸಾಪರ್ಣಿ । ಗೌರೀಂದ್ರಾಣೀ । ಚಾರಣ ಕಿನ್ನರಘಣಿ । ನಾರಿಯರ್ ಕ್ಮಿನಿನಾ ರಿಯ । ರ್ಧೀರಾಬಲೆಯ । ಸ್ಗೀರುತಲಾಪರಿಯ ॥ ಚಾರುಪ ದವನ್ನೈ । ಯಾರದಿಪೇಳ್ವರು । ಹೀರದಹಸೆಗೆಸ । ರೋರುಹ ನೇತ್ರೆ ॥ ಶ್ರೀಕರಕರುಣಾಧುನಿ ॥ ಹಸೆಗೇಳು ॥ ೧ ॥ ಜರತಾರಿ ಸೀರೆಯನುಟ್ಟು । ಸರಿಗೆಯನಿಟ್ಟು । ಮಿರುಗುಕುಪ್ಪುಸವ ತೊಟ್ಟು । ಹೆರಳು ಬಂಗಾರ ಕೈಕಟ್ಟು । ಸರಪಳಿ ಬಟ್ಟು । ಮುರು ವಾಲಿಗಳನಳವಟ್ಟು ॥ ಧರಿಸುತ ಕಂಕಣ । ಚರಣ ವಿಭೂಷಣ । ವರರವ ವೆಸಗುತ । ವರಲಕ್ಷ್ಮಿಯೆ ಸೀಂ ॥ ಶ್ರೀಕರ ಕರುಣಾಧುನಿ ॥ ಹಸೆಗೇಳು ॥ ೨ ॥ ಶಯ ಯುಗ ಳವ ಮುಗಿದು । ಜಯಜಯ ರವದಿಂ । ದಯೆಮಾಡಬೇ ಕೆಂದು । ಭಯ ಭಕ್ತಿಸಹಿತಾನು । ನಯದಿಂದ ವಿಮಲಾ । ಶಯೆಕರೆವರು ನಿನ್ನನು ॥ ಶಯಧೃತ ಸಾರಸೆ । ಭಯಹರೆ ಸರಸೆ । ಜಯನರಸಿಂಹನ । ದಯಿತೆಯೆಮುನ್ನ ॥ ಶ್ರೀಕರ ಕರುಣಾಧುನಿ ॥ ಹಸೆಗೇಳು ॥ ೩ ॥

## ಕೃಷ್ಣದೇವರ ಪರವಾದ ಉರಟಣೀ ಹಾಡು.

ರಾಗ—ಶಹನ. ಮಿಶ್ರಛಾಪು.

ಜಯ ಜಯ ವರಶೀಲ । ಜಯ ಕರುಣಾವಾಲ । ಜಯ ಧೃತನವನಮಾಲ । ಜಯ ಬಾಲಗೋಪಾಲ ॥ ಪ ॥

*[ಹೇರಂಬನಪಾದ | ಸಾರಸಕೆರಗುತ | ಶಾರದೆಯನುಮತಿ| ವಿಾರಿ ಭಜಿಸುತ ] ‖ ೧ ‖ ಗುರುವರ್ಯಚರಣಾಂ | ಬುರು ಹವ ಮನದೊಳ | ಗಿರಿಸುತ ಶ್ರೀನರ | ಹರಿಗೆ ಕಿಂಕರ ನಾಗಿ ‖ ೨ ‖ ತರುಣಿ ರುಕ್ಮಿಣಿ ತನ್ನ | ಪರಿಣಯವೆ ೊ ಳು ಹರಿಗೆ | ಉರಟಣಿಯನು ಗೈದಾ | ಪರಿಯು ನಾ ನೊ ರೆವೆ ‖ ೩ ‖ ಕೂಡುತೆಸತಿಯರು | ಮಾಡಿಸನ್ನಾಹವ | ಪಾಡಿ ಪೊಗಳುತಲಿ |ಹಾಡುಗಳನುಹೇಳಿ ‖೪‖ ಹೀರಪೀಠದಮೇಲು| ಲಾರವ ಹಾಸುತ | ಸಾರ ಮಂಗಳವಸ್ತು | ವಾರವ ತಂ ದಿರಿಸಿ ‖ ೫ ‖ ನಿರುಪಮ ಮೆನೆಸಿಂ | ಗರಿಸುತ್ತಲಾವಧೂ | ವರರನ್ನು ಕರೆದು ಕು | ಳ್ಳಿರಿಸುತ್ತ ಹಸೆಯೊಳು ‖ ೬ ‖ ರಮೆಶಿವೆವಾಣಿಯು | ಪ್ರೇಮದೆಯರನು ಕೂಡಿ | ಮಮ ತೆಯಿಂ ರುಕ್ಮಿಣಿಗೀ | ಕ್ರಮವ ಹೇಳಿದರು ‖ ೭ ‖ ಹರಿ ಗಿದಿರ್ಕೈತಂದು | ಸರಸ ಸಲ್ಲಾಪದಿಂ | ಉರುಟಣಿ ಮಾಡೆನೆ | ಪರಮ ಸಂತೋಷದಿ ‖ ೮ ‖ ಯುವತಿ ರುಕ್ಮಿಣಿಯು | ತ್ಸವದಿಂದೇಳುತ ತನ್ನ | ಧವನಿದಿರ್ಕೈತಂದು | ವಿವರಿಸಿದ ಳಿಂತೆಂದು ‖ ೯ ‖ ಮಕರಕುಂಡಲಕಾಂತಿ | ನಿಕರವಮನೋ ಹರ |ಮುಕುರ ಕಪೋಲವ | ಸುಕುಮಾರಾಂಗನೆತೋರು ‖ ೧೦ ‖ ಕರದೊಳು ಪಿಡಿದಿರು | ವರಿಸಿನವನು ಬೇಗ | ಸರಸವ ನಾಡುತ | ಅರಸ ಹಚ್ಚುವೆನು ‖ ೧೧ ‖ ಶರಣ

---

* [ಧ್ಯಾನಿಸುತಲಿಗಂಧ | ರ್ವಾನನಪಾದವ | ಆನಮಿಸುತವಿಷ್ವ | ಕ್ಸೇನನಪಾದಕೆ ]

ರಿಗಭಯವ । ವಿರಚಿಸುತಿರುವಾ । ಸರಸಿಜಸನ್ನಿಭ । ಕಳ
ಯುಗವನು ನೀಡು ॥ ೧೦ ॥ ವನಜ ಪಾಣಿಯೊಳಾ ।
ನೆನುವಿಂದಪಿಡಿರ್ಪ । ವಿನುತವಾಗಿರುವರಿ । ಸಿನವ ಹಚ್ಚು
ವೆನು ॥ ೧೩ ॥ ವೇದಾಗೋಚರ । ವಾದ ಮನೋಹರ ।
ಪಾದವ ನೀಜಗ । ದಾದಿ ಕಾರಣನೆ ॥ ೧೪ ॥ ಸನ್ನುತಾಂಗನೆ
ನಾನು । ಮುನ್ನ ಮಿಾಯರಿಸಿನ । ವನ್ನು ಹಚ್ಚುವೆಮನ
ದನ್ನನೆಹರಿಯೆ ॥ ೧೫ ॥ ಇಂದೀವರಾಕ್ಷ ಗೋ । ವಿಂದನೆ
ನಿನ್ನಬಾ । ಲೇಂದುಸನ್ನಿಭಪಾಲ । ದಂದವತೋರು ॥ ೧೬ ॥
ಶಂಕರ ಮುಖ ನಿಜ । ಕಿಂಕರ ಶಂಕರ । ಪಂಕಜನಾಭನೆ ।
ಕುಂಕುಮ ವಿಡುವೆನು ॥ ೧೭ ॥ ಸಿಂಧುಶಯನ ಸತ್ಯ ।
ಸಂಧನೆಭಕ್ತರ । ಬಂಧುವೆಸುಂದರ । ಕಂಧರವನು ಕೊಡು
॥ ೧೮ ॥ ಸಾರಕಾಶ್ಮೀರಕ । ಸ್ತೂರಿಪಟೀರಕ । ರ್ಪೂರದ
ಗಂಧವ । ಧೀರನೆಪೂಸುವೆ ॥ ೧೯ ॥ ಯಾಸಾಬ್ಜಪರಾಗ ।
ಭಾಸುರಪರಿಮಳ । ವಾಸಿತವಹಪಟ । ವಾಸವನೆರಚುವೆ ॥
॥ ೨೦ ॥ ಚಾರುಹಾಸನೀಲ । ನೀರದಕಾಯನೆ । ಪಾರಿಜಾತ
ಸುಮ । ಹಾರವಹಾಕುವೆ ॥ ೨೧ ॥ ಉಕ್ಕುವತೋಷದೊ ।
ಳಕ್ಕಿವುಪ್ಪುಗಳನ್ನು । ಸೊಕ್ಕುಜವ್ವನೆಗೀಯ । ಲಕ್ಕರ
ದಿಂದ ॥ ೨೨ ॥ ಎರಡುಕೈಯೊಳುಪಿಡಿದು । ಸರಸವನಾ
ಡುತ । ಹರಿಗೆನಿವಾಳಿಸಿ । ಧರೆಯಮೇಲ್ಬಿಸುಟು ॥ ೨೩ ॥
ಮೂರುಭಾರಿಯುಹೀಗೆ । ಸಾರಸಾಕ್ಷಿಯು ಮಾಡಿ । ನಾಂ
ಕುಳತಳಾ । ನಾರಸಿಂಹನಿದಿರೊಳ್ ॥ ೨೪ ॥

## ಉರಟಣಿ ಮಾಡುವ ಕಾಲದಲ್ಲಿ ವಧುವು ಹೇಳತಕ್ಕ ಸರಸದ ಹಾಡು.

ರಾಗ—ಬೆಹಾಗ್. ಆದಿತಾಳ.

ನೀಲಬಲಾಹಕ । ನೀಲನಿಜಾಂಗಕ । ಪಾಲನಶೀಲ । ಗೋಪಾಲ ॥ ಪ ॥

ದೂಷಣೆ.—ದುರುಳತನದಿ ಪಾಲ್ಕೆನೆಸರನು ಕುಡಿಯುತ। ಕರ ದಿಂದೊರಸಲು ಕರೆಗೂಡಿ । ಹುರಿಯುವ ಓಡಿನೊ ಳಿಹಕರಿಗಲ್ಲ । ಕರಿಸಿನ ಹಚ್ಚುವೆ ನೆರೆನೋಡಿ ॥ ೧ ॥

ಭೂಷಣೆ.—ಮಕರಕುಂಡಲರುಚಿ । ನಿಕರವಿಚಿತ್ರಿತ । ಮು ಕುರಕಪೋಲವನೀದೇವ । ಸಕಲ ಜಗನ್ನಾಯಕ ವರಭಾವುಕ । ಶುಕನುತಪೂಸುವೆನರಿಸಿನವ ॥ ೨ ॥

ದೂಷಣೆ.—ಚಿಣ್ಣಿಕೋಲು ಚೆಂಡು । ಬಣ್ಣದಬುಗುರಿಯು । ಚಿಣ್ಣರೊಡನೆ ನೀನಾಡುತ । ಮಿಣ್ಣನೆ ಕಳುವಿನ । ಬೆಣ್ಣೆತಿಂದಕೈಗೆ । ಬಣ್ಣದರಿಸಿನವಪೂಸುವೆನು ॥೩॥

ಭೂಷಣೆ.—ಕರಿಭಯ ವನುಪರಿ । ಹರಿಸಿ ಹಿರಣ್ಯಾ । ಸುರನ ಮಥಿಸಿಪ್ರಹ್ಲಾದನಿಗೆ । ವರವನಿತ್ತ ಮಣಿಕಂಕಣಭೃತ್ಕರಾಂ । ಬುರುಹಕೆ ಪೂಸುವೆನರಿಸಿನವ ॥ ೪ ॥

ದೂಷಣೆ.—ಬಾಲರೊಡನೆಪಶು । ಜಾಲವಕಾಯಲು । ಕೀಲಿತ ಕಂಟಕ ಮಾರ್ಗದೊಳು । ಕೀಳು ಮೇಲರಿಯದೆ ತಿರುಗಿದನಿನ್ನಯ । ಕಾಲಿಗೆಹಚ್ಚುವೆಜಾವಳವ ॥೫॥

ಭೂಷಣೆ.—ಆದಿನದೊಳುಸವಿ । ನೊದದಿಮೆಟ್ಟಿಕಾ । ಕೋ.

ದರ ಶಿರವನನಾದರಿಸಿ ॥ ಪರ್ಾದಿಮೂರ್ತಿಯೇ ।
ವೇದಾಗೋಚರ । ಪಾದಕೆಪೂಸುವೆಜಾವಳವ ॥ ೬ ॥

ದೂಷಣೆ.—ಮಳೆಗಾಲದ ಮೇಘದ ಲೇಶವುಕ । ಜ್ವಲಗಿರಿತಟ
ದೊಳು ತಳುವಿದವೊಲ್ ॥ ವಲಭಿ ದುಪಲಸಿಭಫಾಲ
ದೊಳಿಡುವೆನು । ಸುಲಲಿತಮೃಗಮದತಿಲಕವನು ॥ ೭ ॥

ಭೂಷಣೆ.—ಆಲೋಲಾಲಕ । ಜಾಲಾಲಂಕೃತ । ಬಾಲಚಂದ್ರ
ನಿಭ ಫಾಲವನೀ ॥ ತ್ರೈಲೋಕ್ಯಾವನ ಶೀಲನೆತಿಲು
ಕವ । ಮೇಲಾಗಿಡುವೆ ಗೋಪಾಲನೆ ॥ ೮ ॥

ಭೂಸುರ ಗಳದೊಳು ವಾಸಿತ ಗಂಧವ । ಪೂಸುತ ಪೂ
ಮಾಲೆಯ ಹಾಕಿ ॥ ವಿಾಸಲಾದ ಪ ಟವಾಸವ ನೆರ
ಚುವೆ । ವಾಸವನುತ ಜಯನರಹರಿಯೆ ॥ ೯ ॥

ಉರಟಣೀಕಾಲವಲ್ಲಿ ವಧುವಿಗೆ ಹೇಳತಕ್ಕ ಹಾಡು.

ರಾಗ—ಶಂಕರಾಭರಣ. ಮಿಶ್ರಛಾಪು.

ಅಂಭೋನಿಧಿಸಂಭವೇರಾಣಿ । ಲಸ । ದಂಭೋಜಸುಂ
ದರಪಾಣಿಕಲ್ಯಾಣಿ ॥ ಪ ॥ ಕುಂಭೀನಸ ವೇಣಿ । ಜಂಭಾರಿ
ಪೋಷಿಣಿ । ಕುಂಭೀಂದ್ರಗಾಮಿನಿ । ಗಂಭೀರಗುಣಧುನಿ ॥ ಅ ॥
ಮಂದಹಾಸರುಚಿಸುಂದರ । ವದ । ನೇಂದುವಕೊಡುಕಾಂತೆ
ಕಾಂತಾಲಕಾಂತೆ । ಇಂದೀವರರಿಸಿನವ । ನಿಂದಿರೆ ಪೂಸುವೆ ।
ಮಂದಗಾಮಿನಿದೇವ । ವಂದಿತೆದಯಿತೆ ॥ ೧ ॥ ಬಾಲೇಂದು
ಸನ್ನಿಭಫಾಲವ । ಕೊಡು । ಲೋಲಾಲಕಾಂಚಿತ ಫಾಲೆ ಸು
ಶೀಲೆ । ಕೀಲಾಲನಿಧಿಬಾಲೆ । ಬಾಲೆಕುಂಕಮವನ್ನು । ಮೇ

ಲಾಗಿಇಡುವೆನು । ಜಾಲವಬಿಡುಬಿಡು ॥ ೨ ॥ ಹಾರಭಾಸುರ ಕಂಬುಕಂಠವ । ನೀಡು । ಸಾರಗಂಧವಹಚ್ಚಿ ಪಟವಾಸ ವೆರಚಿ । ಸಾರಾನಂದವ ನಾನು । ನಾರಿಪೊಂದುವೆನೆಂದು । ಸಾರಿಪೇಳ್ದನು ಜಯ । ನಾರಸಿಂಹನಾಗ ॥ ೩ ॥

ರಾಮದೇವರಪರವಾದ ಉರಟಣೀ ಹಾಡು.

ರಾಗ—ಮಧ್ಯಮಾವತಿ. ಆದಿತಾಳ.

ಜಯ ಪಾದಾವನತೇಂದ್ರ । ಜಯಸದ್ಗುಣಸಾಂದ್ರ । ಜಯ ಪಾಲಿತೇಭೇಂದ್ರ । ಜಯರಾಮಚಂದ್ರ ॥ ಪ ॥

ನಾರಾಯಣಾದಿ ಸುರ । ವಾರಾನಘಪಾದಾಂ । ಭೋರುಹಕ್ಕೆರಗುತ । ತಾರತಮ್ಯದೊಳು ॥ ೧ ॥ ಶ್ರೀರಾಮಚಂದ್ರಂ ಗುಪ । ಚಾರಾದಿಗಳನ್ನು । ಧಾರಿಣೀಸುತೆ ಮಾಡಿ । ದಾರೀತಿಯೊರೆವೆ ॥ ೨ ॥ ಪವಳದ ಪೀಠವ । ತವಕದಿಂ ಹಾಕಿ । ನವರತ್ನಾಸ್ತರಣವ । ಜವದಿಂದಹಾಸಿ ॥ ೩ ॥ ಧರಣೀಂದ್ರರಸಿಯರ್ಗ್ಳು । ಸುರ ಕಾಮಿನಿಯರು । ವರ ಮೌನಿವನಿತೆಯ । ರ್ವೆರೆಯುತ್ತೊಂದೆಡೆಯೊಳ್ ॥ ೪ ॥ ನೂತನಪೀಠದೊ । ಳ್ಸೀತಾರಾಮರನಾ । ರೀತಿಯೊಳ್ಕುಡಿಸಿ । ಕೌತುಕದಿಂದ ॥ ೫ ॥ ಸುಂದರಾಂಗಿಯರೆಲ್ಲ । ರೊಂದಾಗಿ ಸೇರಿ । ಮುಂದಾಗಿ ಗಾನವ । ನಂದು ಮಾಡುತಲಿ ॥ ೬ ॥ ಮೇಲಾದ ದೀಪವ । ಸಾಲುಸಾಲಾಗಿ । ಲೋಲಾಕ್ಷಿಯರಿಡುತಬಲು । ಕೋಲಾಹಲದಿಂದ ॥ ೭ ॥ ಅಂದು ಮಂಗಳವಸ್ತು । ವೃಂದವ ಮುಂದೆ । ತಂದಿರಿಸುತ್ತಲಿಂ ।

ತೆಂದರು ಮುದದೆ ॥ ೮ ॥ ಬಾಲೇಂದು ಸುನಿಟಾಲೆ ।
ಲೋಲಾಲಕಜಾಲೆ । ಕೀಲಾಲನಿಧಿಬಾಲೆ । ಪಾಲನಶೀಲೆ
॥ ೯ ॥ ಮನುಜೇಂದ್ರನಿದಿರೈದಿ । ವಿನಯದಿಂದೀಗ ।
ಮನಮೆಚ್ಚುತುರುಟಣಿ । ಯನು ಮಾಡು ಬೇಗ ॥ ೧೦ ॥
ಎಂದೆನ್ನಲಾ ಭೂಮಿ । ನಂದನೆ ಯದ್ದು । ಸುಂದರಾಂಗನ
ಮುಂದೆ । ಬಂದು ನಿಲ್ಲುತಲಿ ॥ ೧೧ ॥ ಪರಿಹಾಸರೂ
ಪದಿಂ । ಸರಸಾಲಾಪಗಳ । ವಿರಚಿಸಿ ನುಡಿದಳೀ । ತೆರನಾಗಿ
ನಗುತ ॥ ೧೨ ॥ ಪ್ರಣುತ ಕುಂಡಲಕಾಂತಿ । ಗಣ ಚಿತ್ರಿತ
ಮುಖನೆ । ಪ್ರಣಯದಿಂಕೆನ್ನೆಯ । ಗುಣರಾಶಿನೀಡು ॥ ೧೩ ॥
ಕಂತುರೂಪನೆ ಪಾಣಿಯೊ । ಳಾಂತಿರ್ಪರಿಸಿನವ । ಕಾಂತನೆ
ಹಚ್ಚುವೆ । ಸಂತೋಷದಿಂದ ॥ ೧೪ ॥ ಅಂಗಜಾಹಿತಚಾಪ ।
ಭಂಗವಗೈದಾ । ಶೃಂಗಾರಕರವನೀ । ಮಂಗಳರೂಪ ॥ ೧೫ ॥
ಸೂರಾನ್ವಯ ರಾಜಾಶ್ರಿತ । ವಾರಾಮರ ಭೂಜ । ಹಾರಿದ್ರ
ಪ್ರವವನ್ನು । ಸಾರಿ ಹಚ್ಚುವೆನು ॥ ೧೬ ॥ ಶಿಲೆಯಾಗಿ
ಶಾಪದಿಂ । ನೆಲದೋಳ್ಬಿದ್ದವಳಂ । ಲಲನೆಯ ಗೈದ ಪದ ।
ಜಲಜವತೋರು ॥ ೧೭ ॥ ಅರಿಸಿನದಿಂದಲಂ । ಕರಿಸುವೆನಿ
ನನೆ । ಸರಸಸದ್ಗುಣಸಾಂದ್ರ । ಪರರಾಮಚಂದ್ರ ॥ ೧೮ ॥
ನವರತ್ನಯುತಹಾರ । ನಿವಹೋಜ್ವಲವಾದ । ನವಕಂಬು
ಗಳವನ್ನು । ಧವನೇ ಕೊಡು ಬೇಗ ॥ ೧೯ ॥ ಸರಸಪರಿ
ಮಳಭಾರ । ಭರಿತಗಂಧವನು । ಧರಿಸಿ ಪಟವಾಸವ । ನೆರ
ಚುವೆನಾನು ॥ ೨೦ ॥ ಸಾರಪರಿಮಳಭಾರೋ । ದಾರಾರ
ವಿಂದ । ಪಾರಿಜಾತಾದಿಸುಮ । ಹಾರಹಾಕುವೆನು ॥ ೨೧ ॥

ಭಯಭಕ್ತಿಕಲಿತಾನು । ನಯದುಕ್ತಿಗಳನು । ದಯೆಯಿಂದ ಲಾಲಿಸು । ಜಯನಾರಸಿಂಹ. ॥ ೨ ॥

ಉರಟಣೀಕಾಲದಲ್ಲಿ ವಧುವು ವರನಿಗೆಹೇಳತಕ್ಕ ಹಾಡು.

ರಾಗ—ಕೇತಾರಗೌಳ. ಮಿಶ್ರಚಾಪು.

ತರಣಿವಂಶಾಬ್ಧಿಚಂದ್ರ । ವರಗುಣಸಾಂದ್ರ ॥ ಪ ॥ ಶರಣಾವನತಂದ್ರ । ವರದರಾಮಚಂದ್ರ ॥ ಅ ॥ ನಿಗಮ ವಂದಿತಪದನೆ । ಸುಗುಣಾಕರನೆ । ಜಗದೊಡೆಯನೆವರನೆ ॥ ನಗಪತಿವಿನುತನೆ । ಸೊಗಯಿಸುವೀಗಂಡ । ಯುಗಕೆ ಪೂ ಸುವೆನೀ । ಬಗೆಯಾದರಿಸಿನವ ॥ ೧ ॥ ಸುಲಲಿತ ಬಾಲೇಂ ದುವ । ಪಳಿಯುವಸುನಿ । ಟಲದೊಳುದೇವದೇವ ॥ ತಿಲು ಕವನಿಡುವೆನು । ಸಲುಗೆಯಿಂದಲಿನಾನು । ಜಲಜಾಯತಾಂ ಬಕ । ಕಲಿಭಯನಾಶಕ ॥ ೨ ॥ ಅಂಗಜಾರಿಯಚಾಪವ । ಭಂಗವಗೈದು । ತುಂಗಪಾಣಿಯಭೂಪ ॥ ಶೃಂಗಾರಾಂಗನೆ ಕರುಣಾ । ಪಾಂಗನೆ ಕೊಡು ನೀನು । ಪಿಂಗದೆ ಪೂಸುವೆ । ಮಂಗಳಗಂಧವ ॥ ೩ ॥ ನಲ್ಲ ನಿನ್ನಯ ಕೊರಳೊಳ್ । ಉಲ್ಲಾಸದಿಂ । ಮೆಲ್ಲನೆಸಂತಸದೊಳ್ ॥ ವಲ್ಲಭಹಾಕುವೆ ಫುಲ್ಲಮಾಗಿರುತಿರ್ಪ । ಮಲ್ಲಿಗೆಮಾಲೆಯ । ಸಲ್ಲಲಿತಾಂಗನೆ ॥ ೪ ॥ ವರಶಾಪದಿಂಶಿಲೆಯಾ । ಗುರುಳಿದವಳನು । ಚರಣ ಸಂಸ್ಪರ್ಶದಿಂದ ॥ ತರುಣಿಯನೆಸಗಿದ । ಚರಣಕೆ ಜಾವ ಳವ । ಬರೆವೆನು ಹರ್ಷನೆ । ಪರಜಯನರಸಿಂಹ ॥ ೫ ॥

ಉರಟಣೀಕಾಲದಲ್ಲಿ ವಧುವಿಗೆ ಹೇಳತಕ್ಕ ಹಾಡು.

ರಾಗ—ಹಿಂದುಸ್ತಾನಿ ಮುಖಾರಿ. ಆದಿತಾಳ.

ಜಾನಕಿಕಂಜಪಾಣಿರಾಣಿ । ಘಣಿತಾಭವಾಣಿ ॥ ಪ ॥

ಸನ್ನುತಾಂಗಿಶಾರದೇಂದು । ವನ್ನು ನಿಂದಿಪಾಸ್ಯಕೆ । ಮುನ್ನ
ಮೇ ನಿಶಾಚರೂರ್ಣ । ವನ್ನು ನಾನು ಪೂಸುವೆ ॥ ೧
ಲೋಲಕುಂತಲಾಳಿ ಮುಗ್ಧ । ಫಾಲವೀಯ್ಯೆ ಕುಂಕುಮ
ಶ್ರೀಲಸದ್ವಿಶೇಷವನ್ನು ! ಬಾಲೆ ನಾನು ಹಚ್ಚುವೆ ॥ ೨ ॥
ಬಂಧುಜೀವಸನ್ನಿಭೋಷ್ಠ । ಸಿಂಧುರಾಜಕನ್ಯಕೆ । ಕಂಧ
ರಕ್ಕೆನಾನುಚಾರು । ಗಂಧವನ್ನು ಪೂಸುವೆ ॥ ೩ ॥ ಕುಂಡ
ಲೀಂದ್ರ ಚಾರುವೇಣಿ । ಮಂಡೆಯನ್ನು ಬಾಗಿಸು । ಪುಂಡ
ರೀಕ ನೇತ್ರೆ ಜಾಜೀ । ದಂಡೆ ಮುಡಿಸುವೆನು ॥ ೪ ॥
ನಾರಿನೀಡು ಬೇಗದಿಂದೀ । ವಾರಿಜಾಭಪಾಣಿಯು । ಶ್ರೀರಮೆ
ಸುಗಂಧವಂವೈ । ಯಾರಿನಾನುಪೂಸುವೆ ॥ ೫ ॥

ಶ್ರೀನಿವಾಸದೇವರಪರವಾದ ಉರಟಣೀಹಾಡು.

ರಾಗ—ಶಂಕರಾಭರಣ. ಆದಿತಾಳ.

ಜಯಜಯ ಸಾರಸಚರಣ । ಜಯ ರಚಿತಾನತಭರ
ಣ। ಜಯ ಧೀರಾವನಕರುಣ । ಜಯ ಪದ್ಮಾರಮಣ ॥ ಪಲ್ಲ।
* ಆಗಣನಾಥನನೆನೆದು । ವಾಗಧಿದೇವಿಯಭಜಿಸಿ।
ಆಗಮ ಸನ್ನುತ ಹರಿಗೆ । ಬೇಗದೊಳಾ ನಮಿಸಿ ॥ ೧ ॥
ತರುಣಿ ಪದ್ಮಾವತಿಯು । ಪರಿಣಯದೊಳ್ವೇಂಕಟಗೆ ।

* ಜ್ಞಾನಾನಂದದ ಕರುಣಾ । ನೂನ ಶ್ರೀಹಯವದನ । ಧ್ಯಾನವ
ಮಾಡುತ ವಿಷ್ವ । ಕ್ಸೇನನಿಗಾನಮಿಸಿ ॥

ಉರಟಣಿಯಮಾಡಿರುವಾ | ಪರಿಯ ಪೇಳುವೆನು || ೨ |
ಕಮಲಾ ವಾಣಿ ಶಿವೆಯರು | ಸುಮನಸ ಕಾಂತೆಯರನು |
ಯಮಿಕಾಂತಾವನಿಪಾಲ | ಪ್ರಮದೆಯರನ್ನು ಕರೆದು ||೩||
ಅತಿಶಯವಾಗಿಹ ಭೂಷಾ | ತತಿಯಿಂ ದಂಪತಿಗಳನು |
ಕುತುಕದೆ ಸಿಂಗರಿಸುತಲಾ | ಸತಿಯರು ಸತ್ವರದಿಂ || ೪ ||
ರತುನದಪೀಠವಹಾಕಿ | ವಿತತದುಲಾರವಹಾಸಿ | ಕುತುಕದಿ
ಕುಳ್ಳಿರಿಸುತ ದಂ | ಪತಿಗಳ ನಾದರಿಸಿ || ೫ || ಅರಿಸಿನ
ಕುಂಕುಮ ಗಂಧ | ವರ ಪುಷ್ಪ ಮಾಲೆಗಳಿಂ | ಮೆರೆಯು
ವತಟ್ಟೆಗಳಂತಂ | ದಿರಿಸುತ ಕಾಂತೆಯರು || ೬ || ಸರಸಿಜ
ನೇತ್ರೆಯರೆಲ್ಲ | ಸರಸದಹಾಡನುಹೇಳಿ | ತರುಣಿಪದ್ಮಾವತಿ
ಗೀ | ಪರಿಯೊಳುಹೇಳಿದರು || ೭ || ಕಲಹಂಸೋಪಮ
ಯಾನೆ | ಕಲಮಧುರಸ್ವರಗಾನೆ | ಕಲಶಜಸನ್ನುತರಮಣಿ|
ಕಲಕಂಠೀ ವಾಣಿ || ೮ || ಹರಿಗಿದಿರೊಳ್ಕೈತಂದು | ಸರಸಾ
ಲಾಪಗಳಿಂದ | ಉರುಟಣಿಯಂ ಮಾಡೆಂದು | ಒರೆಯಲು
ಕೇಳುತ್ತ || ೯ || ಕಾಂತೆಪದ್ಮಾವತಿಯು | ಕಾಂತನಮುಂ
ದೆಡೆಯೊಳಗೆ | ನಿಂತುಸುಧಾರುಚಿತುಳುಕ | ಲಿಂತೆಂದಳ್ನಗು
ತ || ೧೦ || ವನದಿ ಚಪೇಟವನಾಂತಾ | ನನವನು ತೋರಿಸು
ಕಾಂತ | ಅನುವರಿತೀಯರಿಸಿನವ | ವಿನಯದಿ ಪೂಸುವೆನು
|| ೧೧ || ಲಲನೆಯರೆಲ್ಲರುಪೊಡೆದಾ | ಶಿಲೆಗಳಪೆಟ್ಟನುತಳೆದಾ |
ಅಳಿಕವ ನೀ ವೇಂಕಟನೆ | ತಿಲುಕವ ನಾನಿಡುವೆ || ೧೨ ||
ಮತ್ತಕಾಶಿನಿ ಮಣಿಯ | ಸುತ್ತಿಕೊಳ್ಳುತ ಪೊಡೆಯೆ |
ಅತ್ತಿತ್ತತಿರುಗಿಸಿದಾ | ಕುತ್ತಿಗೆಯಂನೀಡು || ೧೩ || ವಾಸಿತ

ಗಂಧವಹಚ್ಚಿ | ಭೂಸುರಸೂನದಸರವ | ಆಸೆಯೊಳುಹಾಕಿ
ಪಟ | ವಾಸವ ಸಿಂಪಿಸುವೆ ॥ ೧೪ ॥ ಬಲಿಯನು ಮೆಟ್ಟಿದ
ಪಾದ | ತಲವನುಕೊಟ್ಟರೆ ನಾನಂ | ಗುಲಿಯೊಳಗಾಂತಿರು
ವಜಾ | ವಲದಿಂಸಿಂಗರಿಪೆ ॥ ೧೫ ॥ ಉಕ್ಕುವ ಸಂತೋಷ
ದೊಳು | ಸೊಕ್ಕುಜವ್ವನೆಗೀಯೆ | ಅಕ್ಕಿಉಪ್ಪುಗಳತಾ |
ನಕ್ಕರದಿಂ ಕೊಂಡು ॥ ೧೬ ॥ ಎರಡುಕೈಯೊಳು ಪಿಡಿದು
ಸರಸದಬಗಟೆಯೊರೆದು | ಹರಿಗೆ ನಿವಾಳಿಸುತಾಗ | ಸರಭಸ
ದಿಂಬಿಸುಟು ॥ ೧೭ ॥ ಮೂರು ಸಾರಿಯು ಹೀಗೆ | ನಾರಿಪ
ದ್ಮಿಣಿವಾಡಿ | ವಾರಿಜಲೋಚನೆಕುಳಿತಳ್ | ಧೀರನಸಮ್ಮು
ಖದೊಳ್ ॥ ೧೮ ॥ ಕಾಂತೆಗೆನೀನುರುಟಣಿಯಂ | ಸಂತಸದಿಂ
ಮಾಡೆಂದು | ಕಾಂತೆಯರೆಲ್ಲರುಪೇಳೆ | ದಂತಿ ಪಾಲಕನು
॥ ೧೯ ॥ ಸರಸಿಜಕೋಮಲಕರದಿಂ | ದರಿಸಿನವಂಸ್ವೀಕರಿಸಿ |
ದರಹಾಸದ್ಯುತಿ ತುಳುಕ | ಲೊರೆದ ನಿಂತೆಂದು ॥ ೨೦ ॥
ಮುನ್ನ ಮೆಯನ್ನನುನೋಡಿ | ಉನ್ನತಲಜ್ಜೆಯನಾಂತ |
ನಿನ್ನಾಸ್ಯ ಕ್ಕರಿಸಿನವ | ಸನ್ನುತೆ ಪೂಸುವೆನು ॥ ೨೧ ॥
ಬಿದಿಗೆಯ ಚಂದ್ರನ ಜರಿವ | ಮೃದುಲ ಲಲಾಟವತೋರು |
ಸುದತಿಯೆಕುಂಕುಮವನ್ನು | ಮುದದೊಳುಹಚ್ಚುವೆನು
॥ ೨೨ ॥ ಸಿಂಧು ರಾಜ ಕುಮಾರಿ | ಕಂಧರವಂಕೊಡು ನೀನು |
ಗಂಧವನಾಂಹಚ್ಚುವೆನು | ಸಿಂಧುರಗಾಮಿನಿಯೆ ॥ ೨೩ ॥
ಮುಡಿಯನು ಬಾಗಿಸು ಮಡದಿ | ಸಡಗರದಿಂ ಪೂಸರವ |
ಮುಡಿಸುವೆನ್ನೆಯ ಸಖಿಯೆ | ಉಡುಪತಿ ಸನ್ಮುಖಿಯೆ
॥ ೨೪ ॥ ಚಂಚಲನೇತ್ರೆಯರೆಲ್ಲ | ಸಂಚರಿತಾಪದ್ಮಿನಿಯು |

ಕಾಂಚೋಲಿಯನುಕಟ್ಟಿ । ಮುಂಚೆಯೆ ಬಿಚ್ಚೆನಲು ॥೫೦
ಸಾರಸ ಲೋಚನ ನದನು । ಮೂರು ಸಾರಿಯು ಬಿಚ್ಚಿ ।
ಚಾರುಕಂಚುಕವನ್ನು । ಶೌರಿಯು ಬಚ್ಚಿಡಲು ॥ ೫೬ ॥
ಮಡದಿ ಪದ್ಮಾವತಿಯು । ಎಡದ ಕೈಯೊಳು ಪತಿಯ ।
ಮುಡಿಯನು ಬಾಗಿಸಿಕೊಂಡು । ಪೊಡೆಯುತ ಬೆನ್ನಿ
ನೊಳು ॥ ೫೭ ॥ ಸನ್ನುತೆ ಪದ್ಮಾವತಿಯು । ಯನ್ನಪ
ರಾಧಗಳನ್ನು । ಮನ್ನಿಸುತಾ ಕಂಚುಕವಂ । ಮುನ್ನವೆ
ನೀಡೆನುತ ॥ ೫೮ ॥ ಈಪರಿಯಿಂಪದಕೆರಗು । ತ್ತಾ ಪದ್ಮಾ
ವತಿ ಕೇಳೆ । ಓಪಿಗೆ ತಾಂ ಜಯ ನೃಹರಿ । ರೂಪನು
ನೀಡಿದನು ॥ ೫೯ ॥

ವಧುವು ಅಪರಾಧವನ್ನು ಕ್ಷಮಿಸೆಂದು ಪತಿಯುನ್ನು
ಬೇಡುವ ಹಾಡು.

ರಾಗ—ಹುಸೇನಿ. ಆದಿತಾಳ.

ಮನ್ನಿಸು ಹರಿಯೆ । ಗುಣಸಂ । ಪನ್ನ ಶೌರಿಯೆ ॥ಪ॥
ನಿನ್ನ ತೊಡೆಯಮೇಲೆಪಾದ । ವನ್ನು ಇಟ್ಟೆ । ಯನ್ನ ತಪ್ಪ
॥ ೧ ॥ ಆಯತಶಾಸ್ತ್ರ । ಸಂಪ್ರ । ದಾಯವನಿವರು । ತೋಯ
ಜಾಕ್ಷಪೇಳಲಿಂತು । ಜಾಯೆಯು ನಾಂ ಗೈದತಪ್ಪ ॥ ೨ ॥
ಪಾಮಕರದಿಂ । ಶಿಖೆಯ । ಪ್ರೇಮದಿಂ ಪಿಡಿದು । ಸೋಮ
ಮುಖನೆ ನಾನುಗುದ್ದಿ । ಪೆರ್ಮಮಹಾಪರಾಧವನ್ನು ॥ ೩ ॥

ಉರಟಣೀಕಾಲದಲ್ಲಿ ವರನಿಗೆ ಹೇಳುವ ಕಂದಪದ್ಯಗಳು.

ಅರಿಸಿನ.—ಮಂದಸ್ಮಿತ ಸುಂದರಮುಖ । ಚಂದಿರನಂ ತೋ
ರ್ದೊಡರಿಸಿನವ ಪೂಸುವೆ ನಾ ॥ ನಂದದಿ ನಂದಿತ

ಸನ್ಮನಿ | ಬೃಂದಾರಕ ಬೃಂದ ನೆಂದ ನೆಂದ ಮು
ಕುಂದಾ || ೧ ||

ಕುಂಕುಮ.—ಆಲೋಲ ಕುಟಿಲ ಕುಂತಲ | ಜಾಲಾ ಲಂಕೃತ
ವಿಶಾಲಫಾಲಸ್ಥಲದೊಳ್ || ಮೇಲಹ ತಿಲುಕವನಿಡು
ವೆಸು | ಶೀಲತ್ರೈಲೋಕ್ಯಪಾಲಗೋಪೀಬಾಲಾ||೨||

ಗಂಧ.— ಜಲಜಾಯತ ನೇತ್ರಾ ಮಲ | ಜಲದೋಪಮ
ಕಾಯಗೇಯಕೌಸ್ತುಭಮಾಲಾ || ಕಲಿತ ಸುಮಂ
ಗಳ ಗಳದೊಳ್ | ಸಲುಗೆಯೊಳೀ ಸುರಭಿ ಗಂಧ
ವನು ಪೂಸುವೆ ನಾಂ || ೩ ||

ಹಾರ.— ಸಾರ ಪರೀಮಳ ಭರಮಂ | ದಾರಾದಿಮ ಲಲಿತ
ಕುಸುಮಹಾರವಿರಾಜ || ದ್ಧಾರವಧೀರೋದಾರಸು |
ರಾರಾಧಿತ ಪೂತಗೀತಹಾಕುವೆನೀಗಳ್ || ೪ ||

ಬುಕ್ಕಿಟ್ಟು.—ವಾಸವ ನಮಿತಪದಾಬ್ಜ ನ | ವಾಸವ ಮದ
ಮತ್ತದೈತ್ಯವೈರಿಯೆಕರುಣಾ || ವಾಸನೆವಾಸಿತವಹ
ಪಟ | ವಾಸವನೆರಚುವೆನುಕಾಂತರಹಿತಾದ್ಯಂತಾ||೫||

ವರನು ವಧುವಿಗೆ ಹೇಳತಕ್ಕ ಪದ್ಯಗಳು.

ಅರಿಸಿನ.—ಶ್ರೀಕರೆ ಕರುಣಾಕರೆವರ | ರಾಕಾಬ್ಜಾಕಾರ ಸ
ಮುಖಿ ಸಖಿ ಕೆನ್ನೆಗಳಂ || ನೀ ಕೊಡು ಹರಿದ್ರಮಂ
ಮಧು | ರಾಕಾರಾಕರೆ ಸುಧೀರೆ ಪೂಸುವೆನೀಗಳ್ ||೧||

ಕುಂಕುಮ.—ಲೋಲಾಲಕ ಜಾಲಾಂಕಿತ | ಬಾಲ ಕಲಾನಿಧಿ
ಸಮಾನಫಾಲಸ್ಥಲದೊಳ್ ಮೇಲಹಕುಂಕುಮತಿಲು

ಕವ । ನೀಲಾಂ ಬುದ ಜಾಲವೇಣಿ ರಾಣಿಯೆ ಇಡು
ವೇಂ ॥ ೧ ॥

ಗಂಧ.—ಸಿಂಧು ಸುತೆ ದಯಿತೆ ಗುಣ ಯುತೆ । ಸಿಂಧುರಪತಿ
ಗಮನೆ ಕಮನೆ ಸುಂದರಿ ವಿಲಸ ॥ ದ್ಬಂಧುರ ಕಂಧ
ರವಂ ಕೊಡು । ಗಂಧವ ಪೂಸುವೆನು ನಾನು
ಮಾನಿನಿ ಈಗಳ್ ॥ ೩ ॥

ಹೂವು.—ನಿಡುಜಡೆಯಿಂ ದೊಡನೊಪ್ಪುವ । ಮುಡಿಯನು
ಬಾಗಿಸೆಲೆಮಡದಿ ಸಡಗರದಿಂದಂ ॥ ಪಿಡಿದಿರ್ಪ ಪೂ
ಗಡಣವಂ । ಮುಡಿಸುವೆನಾನುಡುಪವದನೆ ಕಡು
ಸಂತಸದಿಂ ॥ ೪ ॥

ಬುಕ್ಕಿಟ್ಟು.—ತಟಿದುಜ್ವಲಾಂಗಿ ಕರುಣಾ । ತಟನೀ ಧರ
ಲೋಚನಾಂತೆ ಕಾಂತೆಯೆ ನಾನೀ ॥ ಪಟವಾಸವ
ನೆರಚುವೆ ಮಣಿ । ಪಟಲಾ ಲಂಕೃತೆ ವಧೂಟಿ
ಭಾಮಿನಿಯೀಗಳ್ ॥ ೫ ॥

ಉರಟಣೀಕಾಲದಲ್ಲಿ ಹೇಳತಕ್ಕ ಮಹಾರಾಷ್ಟ್ರದ
ಓಗಟೆಗಳು.

ವಧುವು ವರನಿಗೆ ಹೇಳತಕ್ಕದ್ದು.

ಹಳದೆ.—ಕೋಟಿಕಾಮನಿಭ ಸುಂದರ ಕಾಂತಾ । ಕುಶಲಾ
ಉಪಚಾರಕರಿತೇಕಾಂತಾ ॥ ಮೋಲೀಪ್ರೀತೀರಚಿತೇ
ಸಜಣಾ । ಮುದಿತಾವಾಂಛಾಪುರವಿಸುಗುಣಾ ॥ ೧ ॥

ಕುಂಕುಮ.—ಸುಧಾಕರಮುಖಾವಿಧಿತ್ಯಾಕಲಾ । ಸುಕಾಂತ
ದೇಹಾಜಾಣಸೀಸಕಲಾ ॥ ಮಣಿಭಾವಾ ತವಭಾಲೀ
ಟಿಕಲಾ । ಮಾನ್ಯಾ ಸಿಟಲೀ ಲಾವಿತೆಟೀಕಾಲಾ ॥ ೨॥

ಗಂಧ.—ಘನಸಾರಹಿಲ್ಲಣಿಕಸ್ತೂರಿಕಾಚಾ । ಘಮುಘುವಿ
ತವಸ್ತುಚಾ । ಸುವಾಸಸೀಟಾ ॥ ಪ್ರಾಣನಾಯಕಾ
ಗಂಧಾಸರಸೆ । ಪರಮಪ್ರೀತಿನೆಲಾವಿತೆಹಿಮಸೆ ॥೩॥

ಅಬೀರ್.—ನಾನಾಸುಮನಪರಾಗೀ ಸಂಯುತೆ । ನಳಿನಲೊ
ಚನಾಜೀ ಸುವಾಸಿತೆ ॥ ಪ್ರಾಣನಾಯಕಾ ಅಬೀರ
ಬುಕ್ಕಾ । ಪಾಹೇತುಜವರಿ ಘಾಲಿತೆ ಐಕಾ ॥ ೪ ॥

ಊದ.—ಧೂಪವರ್ತಿಕಾ ಚಾಘಾರ್ ಸುವಾಸೆ । ಧೀಮಂತಾ
ತೂ ಘೇಈ ಬಹುವಸೆ ॥ ಕೃಪಾ ಕರೂನಿ ಸುಂದ
ರರೂಪಾ । ಕರಿವಾಂಛಾಪೂರಕತೂಸುಕೃಪಾ ॥ ೫ ॥

ಮಾಲಾ.—ಸುಮನಾನೆಬಹುಭವ್ಯಬಾಂಧಿಲಾ । ಸರಸತಾಜಾ
ಹಾರಚಾಂಗಲಾ ॥ ಸುಮನಾಪಕಡೀವರುನಿಕಾಂತಾ ।
ಸರಸಾಘಾಲಿತೆಕಂಠೀನಾಥಾ ॥ ೬ ॥

ಕಡ್ಯಾ.—ಜೋಡಿಕಡ್ಯಾಚಾ ಜೇಕೀ ಸುಂದರ । ಜೋಡುನಿ
ಕರಯುಗೆ ಧೀರಮನೋಹರ । ಶುಂಡಾಸಿಭ ಭುಜ
ತ್ವತ್ಕರಯುಗ್ಮಿ। ಶುಭರೂಪಾ ಘಾಲಿತೆಸಂಭ್ರಮಿ ೭॥

ತುರಾ.—ಭವ್ಯ ಸುಮಕುತ್ತಭವಿಸುಮನಾನಿ । ಬಾಂಧಿಯೆಲಾ
ಜೋ ಬಹುಕುಶಲಾನಿ ॥ ನವ್ಯಸುಗಂಧಯುತೆಜೋ
ಚತುರಾ । ನಯುಸಿಪ್ರಣಾಹೇ ಭಾವಿತೆ ತುರಾ ॥ ೮ ॥

ಫುನಂಗ್—ಅಗಾಧಜೇಚಾ ಸುವಾಸಲೋಕೀ । ಅಖಿಲ ಸುರ
ಗಣೀ ಧರ್ಯ್ಯಾಅವಲೋಕಿ ॥ ಉದ್ಭವಲಾಮನ್ಮನಿ ಅನು
ರಾಗ್ । ಉಟಣೆಲಾವಿತೆ ಕರಿಮಿಾಫುನಂಗ್ ॥ ೯ ॥
ಜವಾದೆ—ನೀಲಮಣ್ಯಾ ಸಮ ಪ್ರಭಾಹಿ ಬರವಿ । ಮಾಲಾ
ಉತ್ತಮದೇತೇಘ್ಯಾವಿ ॥ ಮದನಮನೋಹರ ಪ್ರಾ
ಣಪತೀಲ । ಮಮತೇಲಾವಿತೇ ಜವಾದೆತುಜಲಾ॥೧೦॥

## ವಧುವಿಗೆ ಹೇಳತಕ್ಕ ಮಹಾರಾಷ್ಟ್ರದ ಓಗಟೆಗಳು.

ಉಡುಪತಿವದನೇ ಹೇ ಮಾನಿನಿ । ಉಪಭೋಗಾರ್ಥೀ
ಸುಂದರಿ ಕಾಮಿನಿ ॥ ಚಢತೇ ಸುಂದರ ಪಣವಿಲಾ
ಸಿನೀ । ಚತುರೇ ಸದ್ಗುಣ ಲಸಿತೇ ಸಜಣಿ ॥೧॥
ಹಳದಿ—ಅಪರಂಜೇಚಾಸೋನ್ಯಾ ಐಸೀ । ಅಗಾಧಸಾಭಾಗ್ಯ
ಪ್ರದಭಾಸಿ ॥ ಹೇ ಪ್ರಾಣಸಖೀ ಹಳದೇ ತುಜಲಾ ।
ಹರ್ಷನಿಲಾವಿತೇ ದಾವಿಮುಖಾಲಾ ॥ ೨ ॥
ಕುಂಕುಮ—ಮಾಣಿಕ್ಯಾ ಪರಿ ಚಿಭಾಜ್ಯಾಚೀ । ಮೃಗಾಂಕ
ವದನೇ ಭಾಸುರಸಾಚೀ ॥ ಮಾನಿನಿ ಶುಭಕರ ಕುಂ
ಕುಮಲಾವುನಿ । ಮಂಜುಳವಾಣೀ ಸುರಸವದೋನಿ
॥ ೩ ॥ ಸುವರ್ಣವರ್ಣೆ ಬಹುವಿಚಿತ್ರಿತೆ । ಸುವರ್ಣ
ದೇಹೆ ಜಲಜಸಂಯುತೆ ॥ ಸುವರ್ಣಭಾಷಿಣಿ ಲಾವಿ
ನಟಕಲೀ । ಸುವರ್ಣಜನಿತೆ ತುರ್ಯ್ಯಾನಿಟಲಿ ॥ ೪ ॥

ಗಂಧ—ಮಂದಸ್ಮಿತಮುಖಿಮಾನಿನಿ ಮಜಲಾ । ಮನೋಭಾ ವತವರೂಪೀ ಜಡಲಾ । ಕುಂದರದೆ ಅರವಿಂದಲೋ ಚನೆ । ಘಂದೇ ಲಾವಿನೆ ಗಂಧಾ ಸುಗುಣೆ ॥ ೫ ॥

ಬುಕ್ಕಾ—ಹೇ ಕಾಮಿನೀ ಕಂಜಸುಪಾಣೀ । ಹೇಲಾವತೀ ತು ಕೋಕಿಲವಾಣಿ । ಬುಕ್ಕಾ ಘಾಲೀನತುಜವರಿವೋ ದೆ । ಬರವಾಜೋಕಿ ಅತಿಆವೋದೆ ॥ ೬ ॥

ಊದೆ—ಊದಕಡ್ಯಾಚಾ ಘಮಘಮಾಟ । ಉತ್ಸವಲಾಸೆ ಬಹುತಚೇದಾಟ ॥ ಆದರಿವ್ರೋತೂ ಪ್ರೇಮನಿಗೂತಿ। ಆನಂದಭರಾನೆ ಹೇ ಸುಮತಿ ॥ ೭ ॥

ಮಾಲಾ—ಹಾರಬಿರಾಜೊ ಕಮಾಲಖಾನಿ । ಕೋರಕಗುಚ್ಛಾ ಮಣಿ ಜೀಸಜಣಿ ॥ ಕರಭೋರುಯುಗೆ ಘಾಲೀನ ಕಂಠೀ । ಕಮನೀಯಗುಣೀಯೆ ಉಪಕಂಠೀ ॥೮॥

ರಾಖಡೀಹಾರ್—ಸುಮಸಂಘೇ ಜೋಸರಸ ಗುಂಫಿಲಾ । ಧಮ ಕತೇತೇಜೇಸುವಾಸಲಗಳಾ ॥ ರಾಮಾಮೇಣಿ ರಾಖ ಡೀಚಾಹಾರ । ರಮಣೀಯೆ ಘಾಲಿತೋಮನೋಹ ರ ॥ ೯ ॥

ದಂಡಾ—ಬಹುಸುಂದರತೋ ದಂಡಾಸುಮನೀ । ಬಾಂಧಿಯ ಲಾಅತಿ ಚತುರೀಸುಮನೀ ॥ ಲಾಹೂಶುಭಭರ ಲೇ ವ್ರೋಮಸ್ತಕಿ । ಲಲಿತಗುಣೀತೂಘೇಈಹಸ್ತಕಿ ॥೧೦॥

ಫುನಂಗ್—ಮುಖಕಮಲತುರ್ಝಾ ಪಾಹುನಿದಂಗ್ । ಮುಖರಿತ ವಲಯೆ ಮಾನಸಭೃಂಗ್ ॥ ಶುಕಸಮವಾಣೀ ಜಹ ಲಾರಂಗ್ । ಶುಭಭರಿತೇ ಮಿಲಾಪಿತೋ ಫುನಂಗ್॥೧೧॥

## ತಾಂಬೂಲವನ್ನು ಕೊಡತಕ್ಕ ಕಾಲದಲ್ಲಿ ವಧುವು ವರನಿಗೆ ಹೇಳತಕ್ಕ ಸೀಸಪದ್ಯ.

ಶ್ರೀಕರಾಂ ಭೋಜಾಕ್ಷ। ಲೋಕೇಶ ಮುಖ್ಯಯಕ್ಷ। ನಾಕಪತಿ ನುತಪಾದ। ನಾಥ ವರದ॥ ಗುರುಪೀವರಾತ್ಮಾಂಸ। ಸುರುಚಿಪಿಂಛವತಂಸ। ಭರಣಸದ್ಗುಣಶೀಲ। ಭಕ್ತ ಪಾಲ॥ ಮುನಿಮನೋಂಬುಜಭೃಂಗ। ಘನನೀಲ ಮೃದುಲಾಂಗ। ವನಧಿಸಮಗಂಭೀರ। ವರದ ಧೀರ॥ ತರಣಿಶತ ಸಂಕಾಶ। ನಿರುಪಮಕೃಪಾವೇಶ। ಶರಣಜನತಾವಾಸ। ಶಶಿ ಸುಹಾಸ॥ ॥ಶ್ರೀಪೂರ್ಣನೇತ್ರನೆ। ಕುಂದರದನನೆ।ತಾಪತ್ರಯ ವಿದೂರ। ಸುಗುಣಪೂರ॥ ಶ್ರೀಪತಿಯೆ ವೀಳಯುವ। ದೇವ ದೇವ। ಕೋಪಿಸದೆ ಕೈಗೊಂಡು। ಹರ್ಷವನು ಕೂಡು॥ ೧॥

## ವರನು ವಧುವಿಗೆ ಹೇಳತಕ್ಕಪದ್ಯ.

ಇಂದುಸನ್ನಿಭವದನೆ। ಕುಂದಕುಟ್ಮಲರದನೆ। ಮಂದಹಾಸನಿದಾನೆ। ಮಧುರವಚನೆ॥ ಸರಸಿಜೋಪಮನಯನೆ। ಕರಿಶಾಬ ಸಮಗಮನೆ। ತರುಣಿಮಣಿ ಕಂಬುಗಳೆ। ತತಮಂಗಳೆ॥ ಸುರುಚಿರಾ ಧರಬಿಂಬೆ। ಸರಸ ವಚನಾಲಂಬೆ। ಸರಸ ಸುಗುಣ ಕಲಾಪೆ। ಸಹಜ ರೂಪೆ॥ ಪಲ್ಲವೋಪಮ ಪಾಣಿ। ಸಲ್ಲಲಿತಗುಣಸರಣಿ। ವಲ್ಲಭೆಯೆಕಲ್ಯಾಣಿ। ವಲ್ಗುವಾಣಿ॥ ॥ವನಿತಾ ಶಿರೋಮಣಿಯೆ। ಸರಸಿಜಾಯೆ। ಕನಕ ಸನ್ನಿಭ ಗಾತ್ರೆ। ಸುಗುಣಪಾತ್ರೆ॥ ಅನುನಯದಿ ವೀಳಯ

ವ। ಕೊಂಡುಮುದವ। ವನಜಾಕ್ಷಿ ನೀಂ ತಾಳು। ನುಡಿವು ದನುಕೇಳು ॥ ೧ ॥

ವರ ಹೇಳತಕ್ಕ ಪದ್ಯ.

ಯಾಸಾಸರೋಜಾತ। ಭಾಸುರಾನನೆದಂತ। ವಾಸೋ ವಿಜಿತಬಿಂಬೆ। ವರ ನಿತಂಬೆ ॥ ಚಟುಲ ಬಾಲೇಂದುಸಮ। ನಿಟಿಲತಟ ಪಟುಜಟಿಲ। ಕುಟಿಲ ಕುಂತಲಜಾಲೆ। ಕುಲಜೆ ಬಾಲೆ ॥ ಶೃಂಗಾರಸಾಗರಾ। ಭಂಗುರತರ ತರಂಗ। ಭಂಗೀ ಭವತ್ರಿವಳಿ। ಭಾಸುರಾಂಗಿ ॥ ಸಾಕುಮಾರ್‍ಯಕಲಾಪೆ। ಕೋ ಕಿಲಸಮಾಲಾಪೆ। ಲೋಕೈಕ ನುತರೂಪ। ಲೋಭನೀಯೆ ॥ ॥ ಮೃದುಮಧುರವಾಕ್ಸುಧಾ। ಭ್ಯುದಯೆಜಾಯೆ ॥ ರದನ ನಿನ್ನುತಹೀರೆ। ಸದಯೆನೀರೆ ॥ ಇದಕೊತಾಂಬೂಲವ ನು। ಸುದತಿನೀನು ॥ ಪದುಳದಿಂಕೈಗೊಂಡು। ಮುದವನ್ನು ಕೊಡು ॥ ೩ ॥

ವರ ಹೇಳತಕ್ಕದ್ದು.

ಸಾರ ಸಾರಸ ವದನೆ। ಹೀರ ಭಾಸುರರದನೆ। ಚಾರುಶೀಲ ನಿದಾನೆ। ಚತುರವಚನೆ ॥ ಆನೀಲಘನವೇಣಿ। ಸೋನಂಬಾಣ ಕೃಪಾಣಿ। ಮಾನಿತ ಗುಣ ಶ್ರೇಣಿ। ಮೃದುಳ ಪಾಣಿ ॥ ಕನಕ ಸನ್ನಿಭಗಾತ್ರೆ। ಮನಸಿಜ ಕಲಾಪಾತ್ರೆ। ತನುಮ ಧ್ಯೆಸು ಚರಿತ್ರೆ। ತರಳನೇತ್ರೆ ॥ ವಾರಿಜೋಪಮಪಾಣಿ। ಚಾರುಮತಿನಿಶ್ರೇಣಿ।ತಾರುಣ್ಯವತಿಘಾಣಿ। ತಾ ಭವಾಣಿ ॥ ॥ ಭೃಂಗಸಮಕಾಂತಾಲ।ಕಾಂತೆಕಾಂತೆ। ಅಂಗನಾಮೌಳಿಮಣಿ।

ನೀರೆರಮಣಿ ॥ ಮಂಗಳದ ವೀಳಯವ । ಕೊಂಡು ಮುದ
ವ । ಶೃಂಗಾರರಸಪೂರೆ । ಪೊಂದುವಿತಿಮೀರೆ ॥ ೪ ॥

ವಧು ಹೇಳತಕ್ಕ ಪದ್ಯ

ವರನ ಸಂಸಾರದಾ । ತೆರನ ನಾನೇನೆಂಬೆ । ಸ್ಮರಿಸ
ಲದ ಬಲುನಗೆಯು । ಬರುತಲಿಹುದು ॥ ಸರ್ವ ಪಾಲಕನೆಂ
ದು । ಗರ್ವಪಡು ವೀವರನಿ । ಗೋರ್ವಪತ್ನಿಯು ಚಪಲೆ ।
ಯೋರ್ವಳಚಲೆ ॥ ಪಡೆದ ಪುತ್ರರೊಳೋರ್ವ । ನೊಡಲಿಲ್ಲ
ದವನಾದ । ನುಡಿವುದೇಂ ಬಹು ವೇದ । ಜಡನನ್ಯನು ॥
ನಾಗಪತಿ ಯಿವಗೆ ಸೊಗ । ಸಾಗಿರುವ ಮಂಚವಾ । ಸಾ
ಗರವೆ ಮಂದಿರವು । ಭೋಗವಿಂತು ॥ ॥ ಕರಿತುರಂ
ಗಗಳಿಲ್ಲ । ದಿರುವ ಕತದಿಂ । ಗರುಡಪಕ್ಷಿಯನೇರಿ । ಗಮಿಸು
ತಿಹನೀ ॥ ತೆರನ ನರಿಯದೆ ಜನರು । ಮರುಳರಾಗಿ । ಸಿರಿ
ಯರಸನೆಂದಿವನ । ಮರೆಹೊಗುವರೇಕೋ ॥ ೫ ॥

ವಧು ಹೇಳತಕ್ಕದ್ದು.

ಜನನಿ ಇವಗಾವಳೋ । ಜನಕನಾದವನಾರೊ । ಜನಿಸಿ
ದನೊ ಇವನಾವ । ಮನತನದೊಳು ॥ ಬಲುಮೊಯಿಂದಿರು
ವಿವನ । ಕುಲಗೋತ್ರಶೀಲಗಳ । ನೆಲೆಯು ಕಂಡವರೆ ಭೂ ।
ತಲದೊಳಿಲ್ಲ ॥ ಇವದಕೆ ಮನೆಯಿಲ್ಲ । ದಿರುವಕಾರಣದಿಂದ ।
ಶರಧಿಯುಲಿ ವಾಸವನು । ವಿರಚಿಸುವನು ॥ ಲಲಿತವಾಗಿಹ
ಶಯನ । ಗಳಿಗೆ ಗತಿಯಿಲ್ಲದೆ । ಬಿಳಿಯ ಹಾವಿನ ಮೇಲೆ ।

ಮೆಲಗುತಿಹನು ॥ ॥ ಪರಿಪರಿಯ ದೇಶಗಳ । ತಿರುಗಿ ತಿರುಗಿ । ಅರಸಿ ಕರತಂದರೋ । ವರನ ನಿವನ ॥ ಹರಿಸದಿಂ ಬಂಧುಜನ । ವರಿಯೆನೆನ್ನ । ಚಿರತರದ ಪುಣ್ಯದಿಂ । ದೊರೆತ ನೀವರನು ॥ ೬ ॥

ವಧು ಹೇಳತಕ್ಕದ್ದು.

ಗೆಡ್ಡಗಣ್ಣನು ತೋರಿ । ದೊಡ್ಡ ಮಡುವಿನೊ ಳೀಜಿ । ಗುದ್ದವನು ಪೊತ್ತಬಲು । ದಡ್ಡನಿವನು ॥ ಕೋರೆಹಲ್ಲನು ಕಿರಿದು । ಧಾರುಣಿಯು ಕೆರೆದುಕೊ । ನ್ನಾರಿಗೆಡ್ಡೆಯ ತಿಂದ । ಧೀರನಿವನು ॥ ಬಂದಜನರೆಲ್ಲ ಭಯ। ದಿಂದೋಡುತಿಹರಿವನ । ಸುಂದರಾಸ್ಯವ ನೋಡೆ । ಮುಂದೆ ಬರರು ॥ ಪೊಡವಿಯನು ಬೇಡುತ್ತ । ಕೊಡಲಿಯನು ಧರಿಸುತ್ತ । ಅಡವಿಯೊಳು ಚರಿಸಿದನು । ಬಡವನಾಗಿ ॥ ॥ ಹುಡುಗನಿವನೇ ಚೋರ । ರೊಡೆಯ ಗೋಪ । ಗಡಿಗೆ ಯೊಳು ಪಾಲ್ಮೊಸರ । ಕುಡಿದು ವೇದ । ಗಡಣವನು ದೂಷಿಸುತ । ಕೆಡುಕನಾಗಿ । ಕಡೆಗೆ ಕುದುರೆಯನೇರಿ । ನಡೆದಾತನಿವನು ॥ ೭ ॥

ವರನು ಹೇಳಿತಕ್ಕ ಸೀಸಪದ್ಯ.

ಮಡದಿಮಣಿಯಳ ನಿವಳ । ಪಡೆದ ಜನಕನನೋಡೆ । ಜಡಧಿಯಾಗಿಹನಿವಳ । ಜಾಣ್ಮೆ ಯೆಂತೋ ॥ ಈ ತರುಣಿಮಣಿಯು ಸಹ । ಜಾತನಾದವ ಮಹಾ । ಪಾತಕಿ ನಿಶಾಚರನು । ಪಾಪರತನು ॥ ಆದಿದೊಷಾಕರನು । ಸೋದರಿಯ ಮಂದಿರದ । ಹಾದಿಯನೆ ಕೆಡಿಪುದಕೆ । ಹೋಗುತಿಹ

ನು ॥ ನಿಂತಲ್ಲಿ ನಿಲ್ಲದೇ । ಸಂತತವು ಚಲಿಸುವಳು । ಕಾಂತಾಮಣಿಯುಳವಳ । ಕಾರ್ಯವೇನೊ ॥ ॥ ಧೀರ ರೆಡೆಯೊಳು ನಿಲದೆ । ಸಾರುತಿಹಳು । ಸಾರವಿಷಸಂಭವವಮ । ಗಾರ ಮಿವಳ ॥ ದಾರಿಯನು ತಿಳಿದವರ । ದಾರು ಜಗದೊಳ್। ಧಾರುಣಿಯೊಳಿವಳಂತೆ । ನಾರಿಯರಕಾಣೆ ॥ ೮ ॥

ವರನು ಹೇಳತಕ್ಕದ್ದು.

ಧವಳತರ ದರಹಾಸೆ । ಯುವತೀಜನೋತ್ತಂಸೆ ಸುವಿಪುಲಗುಣಾವಾಸೆ । ಸುಂದರಾಂಸೆ ॥ ಉಲ್ಲಸತ್ಕಂಜಕರೆ। ಪಲ್ಲವೋಲ್ಲಸದಧರೆ । ಸಲ್ಲಲಿತ ಮಣಿಹಾರೆ । ಸರಸಿ ನೀರೆ ॥ ನಿರುಪಮಿತ ತಾರುಣ್ಯೆ ! ನಿರವಧಿಕ ಕಾರುಣ್ಯೆ । ಸುರುಚಿಭ್ರೂಲ್ಲಾವಣ್ಯೆ । ಸುಗುಣ ಗಣ್ಯೆ ॥ ರದನಾಂಶುಜಿತ ಬಿಂಬೆ । ವದನಜಿತ ಶಶಿಬಿಂಬೆ । ಮದನ ವಿಜಯಕಳಂಬೆ । ಮದವಿಲಂಬೆ ॥ ॥ ತನುವಿಜಿತ ಗಾಂಗೇಯೆ । ತರುಣಿ ಜಾಯೆ । ಕಲಪಿಕೀಸಮಗಾನೆ । ಕಲಭಯಾನೆ । ಮುದದೆತಾಂಬೂಲವನು । ಮಡದಿನಾನು । ಕೈಯೊಳಾಂತಿಹೆನರಸಿ । ಕೈಗೊಳ್ಳೆ ಸರಸಿ ॥ ೯ ॥

ವಧುವು ಹೇಳತಕ್ಕದ್ದು.

ಶ್ರೀಹರಿಯೆ ನಿನ್ನಯಾ । ಸಾಹಸವ ನರಿಯದೆ । ಮೋಹಿಸುತ ನಾನಂದು । ಮೋಸಹೋದೆ ॥ ಬಲ್ಲೆಬಲ್ಲೆನು ನಿನ್ನ । ಚಲ್ಲಾಟಗಳನೆಲ್ಲ । ಸೊಲ್ಲಿಸವೇಂ ಫಲವು । ಸೋತ ಮೇಲೆ ॥ ಸರಸವಾಡುವದಲ್ಲಿ । ಬರಿಯುವಮಾತುಗಳಲ್ಲಿ । ಹರಿಸವಾನುವದಲ್ಲಿ । ಮರುಕವಿಲ್ಲಿ ॥ ಸೊಗಸುತೋರುವ

ದಲ್ಲಿ । ದಿಗಿಲುಪಡುತಿಹುದಿಲ್ಲಿ । ನಗೆನೋಟವಲ್ಲಲ್ಲಿ । ಜಗಳ ವಿಲ್ಲಿ ॥ ॥ ಈರೀತಿಯನುನಲ್ಲ । ಮಾಡೆಸಲ್ಲ ॥ ಧೀರ ಪಾಲ ಸುಶೀಲ । ಗೋಪಬಾಲ ॥ ವಾರಿಜೋದ್ಭವವಿನುತ । ಪಾದ ಮಹಿತ ॥ ಗಾರುಗೊಳಿಸದೆ ಹರಿಯೆ । ಕಾಪಾಡುದೊರೆಯೆ॥

ವರನು ಹೇಳತಕ್ಕದ್ದು.

ಶ್ರೀಕರಾಂಬುಜವದನೆ । ಈ ಕೋಪವನು ನೀನೆ । ಸಾಕು ಬಿಡುಬಿಡುಯೆನ್ನ । ಸಾಕುಮುನ್ನ ॥ ಹರಿಸದಿಂ ಬರಲಾನು । ಜರಿದುಮುಳಿಸಿಂದೆ ಮೊಗ । ದಿರುಹಿ ಕುಳಿತಿಹುದೇನು । ದಿಟ್ಟೆ ನೀನು ॥ ಇಟ್ಟೊಡವೆ ತೆಗೆದಿರಿಸಿ । ನಿಟ್ಟುಸುರ ಬಿಡುತರಸಿ । ಪಟ್ಟೆಮಂಚದಿ ಭಾವೆ । ಪವಡಿಸಿರುವೆ ॥ ನೋಡಿತ್ತ ಮನವೆತ್ತು । ಗಾಡಿಯಿಂ ಕಳೆವೆತ್ತು । ಮೂಡುದೆಸೆಯೊಳು ಸಸಿಯು । ಮೂಡುತಿಹನು ॥ ॥ ಭಾವೆ ಬಾಡಿಯಕೇಡ । ಕೇಳಬೇಡ । ಎವೆಸಿನ್ನನುವಾದ ಸಾಕು ಮೋದ ॥ ಭಾವವನು ತೋರಿಸುತ । ಕರುಣಿಸುತ್ತ । ಕಾವಗೀಯೆಡೆಯನ್ನ । ಕಾಪಾಡುಮುನ್ನ ॥ ೧೧ ॥

ತಾಂಬೂಲವನ್ನು ಕೊಡತಕ್ಕ ಕಾಲದಲ್ಲಿ ಹೇಳತಕ್ಕ ಮಹಾರಾಷ್ಟ್ರದ ಹಾಡು.

ವಧು ಹೇಳತಕ್ಕದ್ದು.

ರಾಗ—ಕಾಂಭೋಜಿ. ಆದಿತಾಳ.

ವಿಡಾಘೇಈಪ್ರಾಣನಾಥಾ । ವಿನವಿನೆಚರಣೀತೇವ್ರುಸಿಮಾಥಾ ॥ ವಿನುತಗುಣಾರ್ಣವ ರಾಜೀವಾಕ್ಷಾ । ಪಕ್ಷ್ಮಾಪನದಕ್ಷಾ ॥

ವರನು ಹೇಳತಕ್ಕದ್ದು.

ವಿಡಾ ದೇತೊ ವಿದ್ರುಮಾಧರೇ । ವಿಶೇಷಪ್ರೀತೀನೆ ॥
ವಿವಿಧವಿಲಾಸವಿನೋದಕುಶಲಾ । ವರಿವಿಾಸನ್ಮತಿನೆ ॥ ೧ ॥

ವಧು ಹೇಳತಕ್ಕದ್ದು.

ಸರಸೆಭಲೀಹೇ ಘೋಂಟಸುಪಾರಿ । ಸಭಯೇ ಫೋಡಿಯಲಿಕುಸರೀ ॥ ವರತನು ಚಿಕಣೀಸುಪಾರಿಬಾರಿ । ವದನೀ ಪ್ರೇಮಲಾದರೀ ॥ ೩ ॥

ವರ ಹೇಳತಕ್ಕದ್ದು.

ಸುಭ್ರೂಚತುರೇಫೋಡಿಯಲೀಹೇ । ಸುಂದರಿಸುಪಾರೀ ॥ ಸುರುಚಿಪ್ರದೆಘೋರುಚಿಕರೆಬರವಿ । ಶುಭಕರಿವ್ಯಾದುಲಕರೀ ॥ ೪ ॥

ವಧು ಹೇಳತಕ್ಕದು.

ವಿಲಸತಿ ಪಾಹೇ ಸ್ವರ್ಣಸವರ್ಣೆ । ವಿಡಯಾಚೀತೆಸುರುಚಿರ ಪರ್ಣೆ ॥ ವಿಮಲಾಂಗಾಚೇ ಮುಕ್ತಾ ಚೂರ್ಣೆ। ವಿಲಿಪ್ತಸಾಜತಿಫಡಿಯಾತೂರ್ಣೆ ॥ ೫ ॥

ವರ ಹೇಳತಕ್ಕದ್ದು.

ಕಂಬುಗಳೇ ಹೇಕೋಕಿಲವಾಣೀ । ಕನಕಪ್ರಭ ಭಾರೀ ॥ ಅಂಬುಜ ಮುಕ್ತಾ ಚೂರ್ಣ ಚರ್ಚಿತೆ । ಅಹಿಪರ್ಣಹಿಬಾರೀ ॥ ೬ ॥

ವಧು ಹೇಳತಕ್ಕದ್ದು.

ಸ್ನೇಹಭರಿತಜಾಯಿಸುಫಲಾ । ಸೇವೀಜಾತೀಪತ್ರೀ ಕುಶಲಾ ॥ ಪರಿಮಳ ಯುತ ಕಂಕೋಳ ವೇಳಾ । ಪಾಹೇ ಪ್ರತೀವೇಳೋವೇಳಾ ॥ ೭ ॥

ವರ ಹೇಳತಕ್ಕದ್ದು.

ಸುವರ್ಣಪರ್ಣೀ ವಿಲಿಪ್ತ ಸುದತಿ । ಸುಪ್ಪಾರೀ ಚಿಖಣೀ ॥ ಸುವರ್ಣ್ಣದೇಹೇಖೇಳಯುವತೀ । ಸುಂಟೆಪಂಕಜಪಾಣಿ ॥೮॥

ವಧು ಹೇಳತಕ್ಕದ್ದು.

ಸುಗಂಧೆ ತೈಸಿಬರವಿ ಕಸ್ತುರೀ । ಸುಂಟೇ ಕೇಸರೆ ರುಚಿಕರೆ ಭಾರಿ ॥ ರಂಗವಿಕಾತಹಿಂಬರವಾಸಕರಿ । ರತಿಪತಿ ಸುಂದರರರೂಪಕರಿ ॥ ೯ ॥

ವರ ಹೇಳತಕ್ಕದ್ದು.

ನವರಸಜಾಯಿಪಾಪತ್ರೀಫಲಹೀ । ನಳಿನಾಕ್ಷೀ ಸುಗುಣೀ ॥ ನವರಸಕುಶಲೆ ನಮಿತ ಸುಮಧ್ಯೆ । ನಯ ನಿಪುಣೇ ಸಜಣಿ ॥ ೧೦ ॥

ಅಂಬೇ ಸಿಂಪಿಸಿದ ಹಾಡು.

ರಾಗ—ಕಾಂಭೋಜಿ. ಆದಿತಾಳ.

ಜಯಜಯ ಶ್ರೀರಾಮಚಂದ್ರ । ಮಾನವೇಂದ್ರ ॥ಪ॥
ಜಯ ವದನನಿರ್ಜಿತ ಚಂದ್ರ । ಸುಗುಣ ಸಾಂದ್ರ ॥ ಅ ॥
ನಾರೀ ಮಣಿಯರೆಲ್ಲರು । ಗೌರೀ ಹಾರದ ಮುಂದೆ । ಹೀರ

ಪೀಠವನ್ನು ಹಾಕೆ । ಶ್ರೀ ರಾಮನು ಕುಳಿತಿರಲು ॥ ೧ ॥
ಧಾರುಣೀಜೆಯಂಗಾಲಿಗೆ । ಗೌರವಾದ ಜಾವಳವ । ನಾರಿ
ಯರೆಲ್ಲರು ಕೂಡಿ । ಮೀರಿಹಚ್ಚುತೆಂದರು ॥ ೨ ॥ ಭೂಮಿ
ಜಾತೆ ಸೀತೆ ನೀನೀ । ರಾಮನ ತೊಡೆಯ ಮೇಲೆ । ಪ್ರೇಮ
ದಿಂದಂಗಾಲನಿಟ್ಟು । ವಾಮ ಲೋಚನೆ ॥ ೩ ॥ ಸನ್ನುತಾಂ
ಗನ ಚಂಡಿಕೆ । ಯನ್ನು ಪಿಡಿದು ಗುದ್ದಿ ಬಳಿಕ । ಮನ್ನಣೆ
ಯಿಂದಂಬೆಯ । ಕನ್ನೆ ಸಿಂಪಿಸೆನ್ನಲು ॥ ೪ ॥ ಎಡದತೊಡೆಯ
ಮೇಲೆ ತ । ನ್ನಡಿಯನಿಡುತ ನಸುನಗುತ । ಎಡಗೈಯಿಂದ
ಚಂಡಿಕೆಯ । ಪಿಡಿದು ಗುದ್ದುತ ॥ ೫ ॥ ಮೌನಿ ಮಾನಸಾಂ
ಭೋಜ । ಭಾನುವೆ ಸಜ್ಜನ ಕಾಮ । ಧೇನುವೆ ಪೇಳೀಗ
ನಾ । ನೇನ ಬರೆಯಲಿ ॥ ೬ ॥ ಎಂದೆನೆ ಕೇಳುತಪರಮಾ ।
ನಂದದಿಂದ ರಾಮಚಂದ್ರ । ನೆಂದ ನೆಲೆ ಸುಂದರಿ ಭೂ ।
ನಂದನೆನೀನು ॥ ೭ ॥ ಬಾಲಚಂದ್ರಫಾಲೆ ಬಾಲೆ । ಮೇಲಾದ
ಮಾವಿನ ಗಿಡವ । ಲೀಲೆಯಿಂದ ಬರೆಯೆ ನೀಂ । ಲೋಲ
ಲೋಚನೆ ॥ ೮ ॥ ಮೈಮಾಸಿಕನಾರಿಯರು । ಪೂಮಳೆಯ
ಕರೆಯುತಾಗ । ರಾಮನ ಮಹಿಮೆಯನ್ನು । ಪ್ರೇಮದೆ
ಕೊಂಡಾಡುತಿರಲು ॥ ೯ ॥ ಶಯದಿಂದಂತು ಬರೆದು ಸೀತೆ ।
ಜಯಮಾನುಷಸಿಂಹಪಾದ । ದ್ವಯಕೆನಮಿಸೆಮೌನಿವರರು ।
ಜಯಜಯವೆನಲು ॥ ೧೦ ॥

ರಂಭಾವೃಕ್ಷವನ್ನು ಬರೆಯಿಸಿದ ಹಾಡು.

ರಾಗ — ದರಬಾರು. ಮಿಶ್ರಛಾಪು.

ರಂಭಾವೃಕ್ಷವ ಬರೆಸಿದರು । ಶುಭ । ಸಂಭಾರಗಳ
ತೆರು । ತಂಭೋಜಾ ಕ್ಷಿಯರು ॥ ಪ ॥ ಗರುಡ ಗಂಧರ್ವ

ಕಾಂತೆಯರು । ಕಿ । ನ್ನರ ಕಿಂಪುರುಷ ಭೂ । ವರರಂಗನೆ
ಯರು । ಸುರನರೋರಗರರಸಿಯರು । ಮುನಿ । ವರಸತಿಯ
ರು ಭೂ । ವರರಂಗನೆಯರು ॥ ೧ ॥ ಪವಳದ ಮಂಟಪದಲ್ಲಿ।
ವರ । ನವರತ್ನ ಪೀಠವ । ತವಕದಿಹಾಕಿ । ಕುವಲಯಾಕ್ಷನ
ಕೂಡಿಸುತ್ತ । ಮಹೋ । ತ್ಸವದಿ ಮಂಗಳ ಗಾ । ನವ
ಮಾಡುತ್ತ ॥ ೨ ॥ ಪ್ರಣುತವಾಗಿಹ ಜಾವಳವನು ।
ಕಲಸಿ । ಮಣಿಭಾಜನದೊಳಡು । ತಣಿಯ ಮಾಡುತ್ತ ।
ಗುಣಸಿಧಿ ಕೃಷ್ಣನಂಕದೊಳು । ನಾರೀ । ಗಣಮಣಿ ಶ್ರೀ
ರು । ಕ್ಮಿಣಿಯಕೂಡಿಸುತ ॥ ೩ ॥ ಪರಮಾತ್ಮಬಾಲಗೋ
ಪಾಲ । ನಿ । ನ್ನರಸಿರುಕ್ಮಿಣಿಯಳ । ಬೆರಳನ್ನು ಪಿಡಿದು ।
ಮೆರೆವ ಜಾವಳದೊಳದ್ದುತ್ತ । ಬಾಳೆ । ಮರವನ್ನು ಬರೆ
ಯಿಸೈ । ವರ ಭಿತ್ತಿಯಲ್ಲಿ ॥ ೪ ॥ ಎನೆ ಕೇಳುತಾಗ ಮಾಧ
ವನು । ತನ್ನ । ವನಿತೆಯತರ್ಜನಿಯನ್ನು ಪಿಡಿಯುತ್ತ ।
ಕನಕದ ಗೋಡೆಯ ಮೇಲೆ । ಬಾಳೆ । ಬನವನು ಬರೆಯಿಸಿ
ದನು ದನುಜಾರಿ ॥ ೫ ॥ ಎಡಬಲದೋ ಳಂಗನೆಯರು ।
ನಗುತ । ನುಡಿಯುತ ಸಂತೋಷ । ಪಡುತಿರೆ ತನ್ನ । ಮಡ
ದಿಯ ಕರದಿಂದಲಾಗ । ನಿಂಬೆ । ಗಿಡವನು ಬರೆಸಿದ।ನುಡು
ರಾಜಮುಖನು ॥ ೬ ॥ ತನಿಪಣ್ಣಿಳಿಂದ ರಂಜಿಸುವ । ಮಾ ।
ವಿನ ಮರಗಳನನು । ವಿನೊಳು ಬರೆಯಿಸಿ । ಅನುಪಮ
ನಾರಂಗ ವನವ । ಬರೆ । ದನು ವನಜಾಕ್ಷನು । ವನಿತೆಯ
ರದಿಂ ॥ ೭ ॥ ಸುರ ನಾರಿಯರು ನರ್ತಿಸುತಿರೆ । ತುಂ ।
ಬರುರುಗಾನವ ಮಾಡು । ತಿರೆ ಪೂ ಮಳೆಯು । ಕರೆಯಲು

ಸುರರುಸಂತಸದಿಂ | ಮುನಿ | ವರರು ಜಯ ಜಯ ವೆಂದು | ಕರವೆತ್ತಿ ಪೊಗಳೆ || ೮ || ಅನುವಾಗಿ ಬರೆಸಿದ ಬಳಿಕ | ಬಾಳೆ | ಗೊನೆಯನು ಬಾಗಿಸಿ | ವಿನಯದಿಂ ಬರೆಸಿ | ಅನುಪಮಾನಂದವ ಪೊಂದಿ | ಲೀಲಾ | ಮನುಜರೂಪ ಜಯ | ಮನುಜಕೇಸರಿಯು || ೯ ||

ಚೆಂಡಾಡುವ ಕಾಲದಲ್ಲಿ ಹೇಳುವ ಹಾಡು.

ರಾಗ—ಶಹನ. ಮಿಶ್ರಛಾಪು.

ಚೆಂಡನಾಡಿದನಾ | ಖಂಡಲವಿನುತನು |ಪ|| ಪುಂಡರೀಕಾಕ್ಷನು | ಕುಂಡಾಲ ವರದನು || ಅ || ಸಲ್ಲಲಿತಾಂಗನು | ನಲ್ಲೆಯ ಗಲ್ಲವ | ಮೆಲ್ಲನೆ ಮುಟ್ಟುತ | ಮಲ್ಲಿಗೆ ಹೂವಿನ || ೧ || ರಾಜವದನನ | ವ್ಯಾಜ ಮನೋಹರ | ರಾಜೀವ ನೇತ್ರನು | ಜಾಜಿಯ ಹೂವಿನ || ೨ || ಆ ದಯಿತೆಯ ಕೂಡಿ | ವಾದಗಳನು ಮಾಡಿ | ಮೋದವಾನುತಲಾಗ | ಪಾದರಿ ಹೂವಿನ || ೩ || ಸಿರಿಯೊಡನಾಹರಿ | ಸರಸವನಾಡುತ್ತಾ | ನಿರುಪಮಪರಿಮಳ | ಕುರವಕಕುಸುಮದ || ೪ || ಶಂಪಾಂಗಕಿಶುಭ | ಸಂಪನ್ನೆಯೊಡನಾಗ | ಗುಂಪಾಗಿಕಟ್ಟಿದ | ಸಂಪಗೆ ಹೂವಿನ || ೫ || ಇಂದು ಸುಂದರ ಮುಖ | ನಂದುಸಂತೋಷದಿ | ಇಂದಿರೆಯೊಡನಂದು | ಕುಂದದ ಹೂವಿನ || ೬ || ಪರಿಮಳ ಗಂಧದೊ | ಳ್ಬರದಿಂದದ್ಭುತ ಜಯ | ನರಹರಿರೂಪನು | ಸುರಗಿಯ ಹೂವಿನ || ೭ ||

## ಚಂಡಾಡಿದ ಹಾಡು.

ರಾಗ—ಖರಹರಪ್ರಿಯ. ರೂಪಕತಾಳ

ಚಂಡನಾಡಿದ ನಾಗ ‖ ಪ ‖ ಕುಂಡಲೀಂದ್ರ ಶಯನ ನೊಲಿದು । ದಂಡೆಗಟ್ಟಿರುವ ಸುಮದ ‖ ಅ ‖ ಪಾರಕಾಮಿ ನಿಯರೆಲ್ಲ । ಚಾರು ಗಾನ ವೆಸಗುತಿರಲು । ವಾರಿಜಾಕ್ಷನಾಗ ನಗುತಾ । ಶ್ರೀರಮಾದೇವಿಯೊಡನೆ ‖ ೧ ‖ ಪರಿಮಳ ಗಂಧ ದೊಳಗದ್ದಿ । ತರುಣಿರಮೆಯು ಕೈಗೆ ಕೊಡಲು । ಸಿರಿಯುದ ನಾಹರಿಯುರಕಿಡೆ । ಸರಸಿಜಾಕ್ಷನದನು ಕೊಂಡು ‖ ೨ ‖ ಅಲ್ಲಿಲಜ್ಜೆಪಡುವತನ್ನ । ನಲ್ಲೆಯಾಗಿರುವ ರಮೆಯು । ಗಲ್ಲ ವಿಡಿದು ನಗಿಸುತಾಗ । ಫುಲ್ಲ ಮಲ್ಲಿಕಾದಿ ಸುಮದ ‖ ೩ ‖ ಇಂದಿರೇಶನಾಗ ವಕುಳ । ಮಂದಾರ ಮಲ್ಲಿಕಾರ । ವಿಂದ ಕುರವಕಾಶೋಕ । ವೃಂದದಿಂದಚಂದವಾದ ‖ ೪ ‖ ಲೋ ಕೇಶಮುಖ್ಯದೇವ । ಲೋಕವಾಶ್ಚರ್ಯದಿಂ ವಿ । ಲೋಕಿ ಸುತ್ತಲಿರಲು ವರ । ಶ್ರೀಕರಜಯಮನುಜಹರಿಯು ‖ ೫ ‖

## ಚಂಡಾಡಿದ ಹಾಡು.

ರಾಗ—ಶಹನ. ಮಿಶ್ರಛಾಪು.

ಕಂತುಕ ವಾಡಿದನು । ಕಂತು ಪಿತನು ‖ ಪ ‖ ಅಂತರಂಗದೊ । ಳಾಂತು ಮುದವನು । ಪಂತವೆಸಗುತ । ಲಂತು ನುಡಿಸುತ । ಕಾಂತ ಸದ್ಗುಣ । ವಂತನಾನತ । ದಂತಿ ಪಾಲನು । ಕಾಂತೆಯೊಡನೆ ‖ ೧ ‖ ತರುಣಿಮಣಿಯರು ।

ಸರಸ ಗಾನವ | ವಿರಚಿಸುತ್ತಿರೆ | ಹರಿಯು ಮನದೊಳು | ಹರಿಸ ವಾನುತ | ಸರಸವಾಡುತ | ಅರಸಿಯೊಡನಾ | ಸುರಗಿ ಹೂವಿನ ‖ ೨ ‖ ಸಾರ ಪರಿಮಳ | ಭಾರಭಾಸುರ | ಗೌರ ಕುರವಕ | ಚಾರು ಕಂತುವ | ಸಾರಿಪಿಡಿಯುತ | ಧೀರಸನ್ಮುನಿ | ನಾರದ ಸ್ತುತ | ನಾರಸಿಂಹನು ‖ ೩ ‖

ಚೆಂಡಾಡುವ ಹಾಡು.

ರಾಗ—ಆನಂದಭೈರವಿ. ಮಿಶ್ರಛಾಪು.

ಚೆಂಡನು ಪುಂಡರೀಕಾಕ್ಷನು | ಮುಂ | ಕೊಂಡು ಕೊಂಡಾಡುತಾಡಿದನು ‖ ಪ ‖ ಕುಂಡಲ ಭಾಸುರ | ಗಂಡಯುಗೆಯೊಡನಾ | ಶುಂಡಾಲವರದನು | ದುಂಡಾದಮುತ್ತಿನ ‖ ಅ ‖ ಸಲ್ಲಲಿತಾಂಗ ವೇಂಕಟನು | ತನ್ನ | ನಲ್ಲೆ ಪದ್ಮಾವತಿಯನ್ನು | ಗಲ್ಲವ ಪಿಡಿಯುತ | ಮೆಲ್ಲನೆ ನುಡಿಸುತ | ಫುಲ್ಲವಾಗಿರುತಿರ್ಪ | ಮಲ್ಲಿಗೆಹೂವಿನ ‖ ೧ ‖ ರಾಜಾನನೆಪದ್ಮಾವತಿ | ಸುರ | ರಾಜಿ ವಂದಿತ ವೇಂಕಟನೊಳ್ | ವ್ಯಾಜಹಾಸ್ಯವನು | ಸಾಜದಿಂ ಮಾಡಲು | ರಾಜೀವ ನೇತ್ರನು | ಜಾಜಿಯ ಹೂವಿನ ‖ ೨ ‖ ಸಂಪದಾದಿ ಕಾರಣೆಯಾದ | ಬಲು | ಪೆಂಪಿನರೂಪವ ತಳೆದ | ಶಂಪಾಂಗಿಯೊಡನೆ ನಿ | ಲಿಂಪವರೇಣ್ಯನು | ಗುಂಪಾಗಿ ಕಟ್ಟಿದ | ಸಂಪಗೆ ಹೂವಿನ ‖ ೩ ‖ ಮಂದರಧರ ನಾಗ ನಗುತ | ಪರಮಾ | ನಂದವ ಮನದೊಳಾನುತ್ತ | ಮುಂದು ವರಿದು ಪಾಣಿ | ಯಿಂದ

ಕಂತುವನಾನು | ತಿಂದಿರೆಯೊಡನಾಗ | ಕುಂದದ ಹೂವಿನ ॥ ೪ ॥ ಪರಿಮಳ ಗಂಧದೊಳಾಳಿ | ಸುತ | ಲಿರದೆ ಸಂತೋಷವ ತಾಳಿ | ಸರಸಸಲ್ಲಾಪವ | ವಿರಚಿಸುತಲಿಜಯ | ನರಹರಿರೂಪನು | ಸುರಗಿಯ ಹೂವಿನ ॥ ೫ ॥

ಚೆಂಡಾಡಿದ ಹಾಡು. ೯

ರಾಗ—ಜಂಜೋಟಿ. ರೂಪಕ.

ಚೆಂಡನಾಡಿದ | ಶುಂಡಾಲವರದ ॥ ಪ ॥ ಚಂಡವೈರಿ ಖಂಡನೋ | ದ್ದಂಡಬಾಹುದಂಡನುವಿ | ಧ್ಯಂಡಪತಿಯು | ಕೊಂಡು ಮುದವ | ದಂಡೆಗಟ್ಟಿರುವ ಸುಮದ ॥ ಅ ॥ ಸರಸಗಾನವ | ತರುಣಿಯರೆಲ್ಲ | ವಿರಚಿಸುತ್ತಿರೆ ॥ ಹರಿಯು ಕೇಳಿ | ಹರಿಸಗೊಂಡು | ಅರಸಿಯೊಡನೆ | ಸರಸವಾಡು | ತಿರಲು ರಮೆಯು | ಕರದೊಳೆಸೆಯೆ | ಪರಿಮಳ ಭರ | ಭರಿತಸುಮದ ॥ ೧ ॥ ಇಂದುಮುಖಿಯರು | ತಂದೀಯಲು ಪಿರ | ತೊಂದುಚೆಂಡನು ॥ ಇಂದಿರೆಗೋ | ವಿಂದನುರಕೆ | ಚೆಂದದಿಂ ದಲೆಸೆಯ ಲದನು | ಸುಂದರನಾಂ ತದನುಬಂದ | ನಂದನನಾನಂದದಿಂದ ॥ ೨ ॥ ವನಜನಾಭನಾ | ಮನುಜಾವತಾರ | ದನುವ ನೋಡುತ ॥ ಮನದೊಳಾಶ್ಚರ್ಯವಾನು | ತನಿಮಿಷಾಳಿ ಕರವ ಮುಗಿದು | ಘನಮೆನೆ ಪೂ ಸರಿಯ ಸುರಿಯು | ಲನಘನು ಜಯಮನುಜಹರಿಯು ॥ ೩ ॥

ಚೆಂಡಾಡುವ ಕಾಲದಲ್ಲಿ ಹೇಳತಕ್ಕಮಹಾರಾಷ್ಟ್ರದಹಾಡು,

ರಾಗ—ಶಂಕರಾಭರಣ. ಆದಿತಾಳ,

ಸುಮನೀಜೋಗುಂಫಿಲ | ಕಮನೀಯಜಹಲಾಭಲ| ಸುಮನೋನಾಥದಿಥಲ | ಝೋಲೀಕರಿ || ಸಖಯು || ಝೋಲೀಕರಿ || ೧ || ಮಾಲಾಜಿಳಗಳ | ಮೋತ್ಯಾಬಾಜಣಬಾಂಗಲ| ಮಾಘಾನಿವಿಗಾತುಜಲ | ಝೋಲೀಕರಿ || ಸಖಯು || ಝೋಲೀಕರಿ || ೨ || ಹೇ ಕಾಮ ಸುಂದರ | ಹೇಮಾಭ ಸುರುಚಿರ| ಪ್ರೇಮಜಹಲ ಉದಾರ | ಝೋಲೀಕರಿ || ಸಖಯು || ಝೋಲೀಕರಿ || ೩ ||

ಚೆಂಡಾಡಿದ ಹಾಡು.

ರಾಗ—ಕಲ್ಯಾಣಿ. ಮಿಶ್ರಛಾಪ್.

ಚೆಂಡನಾಡಿದನು | ಶಂಡಾಲವರದನು || ಪ || ಕುಂಡಲಯುಗರುಚಿ | ಮಂಡಲಮಂಡಿತ | ಗಂಡಯುಗೆಯೊಡನೆ || ಅ || ಸಾರಪರೀಮಳಭಾರಾನುವಾಸಿತ | ಚಾರುಚಂಪಾ ಮಲ್ಲಿಕಾಕುಂದಕುರವಕ ||ಕೈರವನಾಗಪುನ್ನಾಗಪಾಟಲಿಕಾ | ಪಾರಿಜಾತಮಂದಾರಾರವಿಂದದ || ೧ || ಓಡಾಡುತ ವೃದ್ಧಸತಿಯರುಬೀಗಣಿ | ಮಾಡಲು ತರುಣೀಮಣಿಯರು ಸರಸವ || ನಾಡುತಲೆಲ್ಲರು ಕೂಡುತೊಂಡೆಯೊಳು | ಹಾಡುಗಳನು ಹೇಳಿ ಪಾಡಿಪೊಗಳುತಿರೆ || ೨ || ದಂತೀಂದ್ರಗಮನೆಯು ಸಂತಸದಿಂದಲಾ | ಕಂತುಕವನುಗಂಧದಲ್ಲದ್ದುತಾ || ಕಾಂತೆ ರುಕ್ಮಿಣಿ ಕೈಗೆ ಕೊಡ ಲವ ಳಡಲದ | ನಾಂತು ಸಂತೋಷದಿ ಜಯನರಸಿಂಹನು || ೩ ||

ವಧು ವರನಿಗೆ ಹೇಳುವ ಸರಸದ ಹಾಡು. (ನಿಂದಾಸ್ತುತಿ.)

ರಾಗ—ಖರಹರಪ್ರಿಯ. ರೂಪಕತಾಳ.

ಎಲ್ಲಿ ದೊರತನೋ । ಎನಗೆ । ನಲ್ಲನೀತನು ॥ ಪ ॥ ಮೆಳ್ಳಗಣ್ಣು । ಡೊಳ್ಳುಹೊಟ್ಟೆ । ಹಲ್ಲುಕಿರಕ । ಜೊಲ್ಲು ಸುರಕ ॥ ಅ ॥ ಹಣ್ಣುಕಾಣದೆ । ಹಾದಿ । ಮಣ್ಣುತಿಂದನು । ಚೆಣ್ಣನುಕರಿ । ಬಣ್ಣದವನು । ಬಣ್ಣಿಸಲೇಂ । ಬೆಣ್ಣೆ ಕಳ್ಳ ॥ ೧ ॥ ಹಾಲನಿತ್ತವ । ಳಸುವ । ಹಾಳು ಗೈದನು ॥ ಮೇಲೆ ಹೊಟ್ಟೆಗಿಲ್ಲದೆ ಶಿಖಿ । ಮಾಲೆಯನ್ನು ನುಂಗಿದವನು ॥ ೨ ॥ ಮಡದಿಮಣಿಯರ । ಮನೆಯ । ಬಿಡದೆ ಪೊಗುತಲಿ । ಗಡಿಗೆ ಯೊಡೆದು ಸುರಿವಮೊಸರ । ಕುಡಿದಕೆಡುಗ । ಹುಡುಗ ನೃಹರಿ ॥ ೩ ॥

ಹುಡುಗಿ ಹೇಳತಕ್ಕ ಸರಸರದ ಹಾಡು.

ರಾಗ—ಜಲಾವ. ಆದಿತಾಳ

ಎಲ್ಲಿಕರತಂದರೊ । ಭಲ್ಲೂಕರೂಪನ । ಸಲ್ಲಲಿತಾಂಗಿಗೀ । ವಲ್ಲಭನನ್ನು ॥ ಪ ॥ ನಾನಾವೇದನಿ । ದಾನವ ತಿಳಿದ ಯಿಾ । ಜ್ಞಾನಿಗಳಣುಗಿಗೀ । ವಾನರವರನಾ ॥ ೧ ॥ ಓದದೆ ಬರೆಯದೆ । ಬೀದಿಬೀದಿಯು ತಿರುಗಿ । ಕಾದಲು ಬುದ್ಧಿವಂತ । ನಾದ ಯಿಾವರನ ॥ ೨ ॥ ಅಕ್ಷರಂಗಳನು ನಿ । ರೀಕ್ಷಿಪುದರಿಯನು । ಕುಕ್ಷಿಭರಣದೊಳ । ಪೇಕ್ಷೆಯುಳ್ಳವನು ॥ ೩ ॥ ಅರಿಯದೆ ಮೋಸಕೆ । ಗುರಿಯಾದರಲ್ಲ ಯಿಾ । ಪರಿಯನು ಜಯನರ । ಹರಿಯೇಬಲ್ಲ ॥ ೪ ॥

ಹುಡುಗಿ ವರನಿಗೆ ಹೇಳತಕ್ಕಸರಸದ ಹಾಡು. (ನಿಂದಾಸ್ತುತಿ.

ರಾಗ—ಝಂಜೋಟಿ. ರೂಪಕತಾಳ.

ನೋಡಿರೆಲ್ಲರು | ಸಂತೋಷವನ್ನು | ಕೂಡಿರೆಲ್ಲರು ‖ ಪ ‖ ಮಾಡಿಕೊಂಡಬಳಿಕಸುಮ್ಮ | ನಾಡಲೇನು ಫಲವು ಪಿತನು | ನಾಡನಾಡತಿರುಗಿತಿರುಗಿ | ಕೂಡಲಿಕರೆತಂದವರನ ‖ ಅ ‖ ನುಡಿವೆನಾರೊಳು | ನಾನು | ಪಡೆದಪುಣ್ಯವ ‖ ಸಿಡು ಕರಿವನ | ಪಡೆದ ಜನರು | ಬಡವರೀಗ | ದುಡುಕಲೇಕೆ | ಪೊಡವಿಯಲ್ಲ | ಬಿಡದೆತಿರುಗಿ | ಹುಡುಕಿತಂದ | ಹುಡುಗನಿವ ನ ‖ ೧ ‖ ಬಿಟ್ಟುಕಣ್ಣನು | ದೊಡ್ಡ | ಬೆಟ್ಟಹೊತ್ತನು ‖ ಕುಟ್ಟಿನೆಲವ | ಹೊಟ್ಟುತಿಂದು | ಸಿಟ್ಟನಿಂದ | ಲಟ್ಟಿಬಲಕ | ಹೊಟ್ಟೆಸೀಳು | ಶಿಷ್ಟದಾನ | ಕೊಟ್ಟವನನು | ಮೆಟ್ಟಿದವನ ‖ ೨ ‖ ಜನಕನಾಜ್ಞೆಯಿಂ | ಮಾತ್ರ | ಹನನವೆಸಗುತ ‖ ವನದಿತಿರುಗಿ | ವಿನುತ ಚೋರ | ನೆನಿಸಿ ನಿಗಮ | ವನುರೆ ಹಳಿದು | ಕೊನೆಗೆಕಲ್ಕಿ | ಯನಿಸಿಮೆರೆದ | ವಿನುತವಿಜಯ ಮನುಜ ಹರಿಯು ‖ ೩ ‖

ವಧು ವರನಿಗೆ ಆರತಿ ಯೆತ್ತುವ ಹಾಡು.

ರಾಗ—ಆರಭಿ. ರೂಪಕತಾಳ

ನಾರಿದೇವಕಿ | ಯುದರ | ವಾರಿಧಿಯೊಳವ | ತಾರ ವೆಸಗಿ | ಗೋಕುಲವನು | ಸೇರಿಬಾಲಲೀಲೆಗಳನು | ತೋ

ರುತಾಯಶೋದೆಗೆಂದು । ಸಾರವುದವನಿತ್ತಹರಿಗೆ ॥ ಹೀರ ದಾರತಿಯಬೆಳಗಿರೆ ॥ ೧ ॥ ಗೆಳೆಯರೆಲ್ಲರ । ಕರದು । ಕೊಳ ಲನೂದುತಾ । ಕಳನುಕೂಡಿ । ಚಲಿಸಿಮಹಾ । ಚಲವನಿತ್ತ । ಲಲನೆಯರೊಡ । ಗಲಸಿಗೋಪಕುಲವಪೊರೆದ । ಜಲಜನಾ ಭ । ಲಲಿತಹರಿಗೆ ॥ ಕಲಶದಾರತಿಯಬೆಳಗಿರೆ ॥ ೨ ॥ ದನು ಜಕಂಸನ । ಕೊಂದ । ವನಿಯಭಾರವ । ಅನುವಿನಿಳುಹು । ತನುಪವುಸುರ । ಜನವ ಕಾಯ್ದ । ಮುನಿಜನಾಬ್ಜ । ದಿನ ಪಜಗ । ಜ್ಞನಕಗೆಸ । ಜ್ಞನಪತಿಜಯ । ಮನುಜಹರಿಗೆ ॥ ಕನಕದಾರತಿಯಬೆಳಗಿರೆ ॥ ೩ ॥

### ವಧೂವರರಿಗೆ ಆರತೀಯುತ್ತುವ ಹಾಡು.

ರಾಗ—ಸುರಟಿ. ಆದಿತಾಳ

ಅಣಿಯರದಿಂ ನಾರೀ । ಮಣಿರು । ಗ್ಮಿಣಿಯೊಡನೀ ಹಸೆಯು ॥ ಮಣೆಯೊಳು ಕುಳಿತಿಹ । ಫಣಿಪತಿ ಶಯನಗೆ । ಗುಣಮಣಿಗಣಭೂ । ಷಣಭೂಷಿತೆಗೆ ॥ ಪ್ರಣಯದೊ ಳಾ ರತಿಯಬೆಳಗಿರೆ ॥ ೧ ॥ ನಾಗವೇಣಿಯರೆಲ್ಲ । ಬಲುಸೊಗ । ಸಾಗಿಗಾನವೆಸಗೆ ॥ ಆಗಮಮಂತ್ರದ । ಘೂಗವ ಹೇಳುತ । ಲಾಗಮುನಿಗಳನು । ರಾಗದಿಪೊಗಳೇ ॥ ಬೇಗದೊಳಾರತಿಯ ಬೆಳಗಿರೆ ॥ ೨ ॥ ತರುಣೀಮಣಿಯೊಡನೆ । ಸಿರುಪಮ ಸರಸವನಾಡುತ್ತ ॥ ಶರಣಾಗತರನು । ಕರುಣದಿಪೊರೆಯುವ ವರಗುಣಯುತಜಯ । ನರಸಿಂಹನಿಗೇ ॥ ಮರಕತದಾರ ತಿಯ ಬೆಳಗಿರೆ ॥ ೩ ॥

## ಊಂಜಲಾಡುವಾಗ ಹೇಳುವ ಹಾಡು. (ಉಯ್ಯಾಲೆ.)

ರಾಗ—ಕೇತಾರಗೌಳ. ಝಂಪತಾಳ.

ಉಂಜಲಾಡಿದನುಹರಿಯು | ಕಂಜಾತ | ಮಂಜುಲಾಂಬಕ ಶೌರಿಯು | ಸಂಜಾತ ತೋಷದಿಂದ | ಮಣಿ ಖಚಿತ | ಮಂಜೀರರುಚಿರವಾದ ‖ ಪ ‖ ಹೀರವುರಕತ ಮುಖನವ | ನವರತ್ನ | ಚಾರುಮಂಟಪವರಚಿಸಿ | ತೋರಮುತ್ತಿನತೋರಣಂ | ಗಳಕಟ್ಟಿ | ನಾರಿಯರು ತೋಷವೆರಸಿ ‖ ೧ ‖ ಎಸೆಯುತಿಹನೀಲಮಣಿಯ | ಸರಪಳಿಗೆ | ವಿಸುನಿಹಸೆಮಣೆಯ ಕಟ್ಟಿ | ಅಸವಸದೊಳಾಸ್ತರಣವ | ಹಾಕಿಸರಿ | ಯಸಗುತ್ತ ಬೇಗದಿಂದ ‖ ೨ ‖ ಜಾತಿಮಲ್ಲಿಗೆಸಂಪಗೆ | ವಕುಳಸುಮ | ಜಾತವನಿರದೆಕಟ್ಟುತ | ಶಾತಕುಂಭಮನೋಹರ | ಮಂಟಪವ | ನೂತನದಿಸಿಂಗರಿಸುತ ‖ ೩ ‖ ಇನನಂತೆಸೆವದೀಪವ | ನಾಲ್ಕುದಿ | ಕ್ಕಿನೊಳಿಟ್ಟುಬೆಳಗುತ್ತಿರಲು | ವನಿತೆಯರರಿಸಿನ ಗಂಧ | ಕುಂಕುಮಗ | ಳನುಬೇಗೆತಂದಿರಿಸಲು ‖ ೪ ‖ ಸರಸಿರುಹ ಭವ ಭವಮುಖ | ಸುರರುಂ ಕಿಂ | ಪುರುಷ ನಾರದ ತುಂಬುರ | ವರ ಯಕ್ಷ ಸಿದ್ಧ ಮುನಿಭೂ | ಸುರರು ನರ ಹರಿಯೆ ಜಯಜಯ ವೆನ್ನುತ ‖ ೫ ‖ ಪೊಗಳುತಿರೆ ಸುರಸತಿಯರು | ನರ್ತಿಸಲು | ಮಿಗೆಶುಭಾರವವುವೊಳಗೆ | ನಿಗಮಗೋಚರ ವೇಂಕಟಾ | ಚಲ ಪತಿಯು | ಬಗೆಯಲ್ಲಿ ಮುದವನಾಂತು ‖ ೬ ‖ ಗೌರ ವಸನವ ನುಡುತ್ತ | ಚಾರು ಮಣಿ | ಹಾರವನು ಗಳದಿಧರಿಸಿ | ಹೀರಮಯ ಬಾಹುಪುರಿಯ | ತಾಳ್ದಿಶ್ರೀಂ | ಗಾರಗೊಳ್ಳಲುಶ್ರೀಶನು ‖ ೭ ‖ ಮಣಿಖಚಿತತಾಟಂಕ

ದಿಂ | ಕಡಗಕಂ | ಕಣ ಹೀರ ಹಾರನಾಸಾ | ಮಣಿಕಾಂಚಿ ಕಿಂಕಿಣಿಗಳಿಂ | ಸಿಂಗರಿಸಿ | ಫಣಿವೇಣಿಪದ್ಮಿನಿಯನು || ೮ || ಉಲ್ಲಾಸದೊಳುವೇಂಕಟೇ | ವಲ್ಲಭನು | ನಲ್ಲೆಯಳ ಕರವ ಹಿಡಿದು | ಮೆಲ್ಲಡಿಯ ಮೆಲ್ಲನಿಡುತಾ | ಉಯ್ಯಾಲೆ | ಯಲ್ಲಿ ಕುಳಿತಿರಲು ತಾನು || ೯ || ನಾಗವೇಣಿಯರೊಲಿಯುತ | ಇಂಚರದೊ | ಳಾಗಲನುರಾಗದಿಂದ | ಬೇಗಪದ್ಮಿನಿವೇಂಕಟ | ಪಾಲಕರ | ತೂಗಿದರುಪಾಡುತೊಲಿದು || ೧೦ || ಧ್ವಜ ಕ ಮಲಚಕ್ರಾಂಕಿತ | ಪದಯುಗನೆ | ತ್ರಿಜಗವನು ಪಾಲಿಸುವ ನೆ | ಅಜಮುಖಾಮರವಿನುತನೆ | ವೇಂಕಟನೆ | ಭುಜಗಾ ಧಿಪತಿಶಯನನೆ || ೧೧ || ಶ್ರೀಲೋಲಭಕ್ತಪಾಲ | ಕರುಣಾ ಲ | ವಾಲಧೃತಸುವನಮಾಲ | ನೀಲಘನನೀಲನೀಲ | ಶ್ರೀ ಶೇಷ | ಶೈಲೇಂದ್ರಜಯಸುಶೀಲ || ೧೨ || ಪಾರ್ವಣ ಶಶಾಂ ಕಮುಖನೆ | ದೈತ್ಯಕುಲ | ಗರ್ವಸರ್ವಸ್ವಹರನೆ | ಗಿರ್ವಾಣೇಡಿತಪಾ ದನೆ | ಜಗದೊಳಗೆ | ಸರ್ವೋತ್ತಮೇಶ ನೀನೆ || ೧೩ || ದಯಮಾನದೀರ್ಘನಯನ | ಭಕ್ತಜನಾ | ನ್ವಯಗೇಯ ಸು ಗುಣಸದನ | ಭಯದೂರಧೀರಶೂರ | ಜಗದುದರ | ಜಯ ಮನುಜಹರಿಯೆಹರಿಯೆ || ೧೪ ||

ಊಂಜಲದ ಹಾಡು.

ರಾಗ—ನಟಭೈರವಿ.

ಯಾಸಾಂಬುಜಾತಮುಖನಾಡಿದನುಂಜಲಂಶ್ರೀ | ಭೂ ಸಂಯುತಂವರದಸತ್ಕರುಣಾವಲೋಕಂ || ದಾಸಾವಳೀಸುರ

ಕುಜಂತಪನೀಯಮುಗ್ಧ | ವಾಸೋವಿರಾಜಿತನಿಜಾಂಗನನಂ
ಗತಾತಂ ॥ ೧ ॥ ಕೂಡಿರ್ದಕಾಮಿನಿಯರೆಲ್ಲರುಹರ್ಷದಿಂದಂ |
ಮಾಡುತ್ತಬೇಗನೆಮನೋಹರಗಾನಮಂತಾ ॥ ವಾಡೋಲಿಕಾ
ಫಲಕಮಂಪಿಡಿಯುತ್ತಲಾಗಳ್ | ನೀಡುತ್ತೆ ಕೈಗಳನು ತೂಗಲು
ಬೇಗತಿಂದಂ ॥ ೨ ॥ ದೇವಾಳಿಯಾಗಕ ರೆಯಲ್ಸುಮ ವೃ
ಷ್ಟಿಯಂಭೂ | ದೇವವ್ರಜಂಸ್ತುತಿಸಲಾಗಮಮಂತ್ರದಿಂದಂ |
ತೀವಿರ್ದವಾದ್ಯತತಿರಾವವ್ರಘುಮ್ಮಿಡಲ್ರಾ | ಜೀವೇಕ್ಷಣಂ ಸ
ದಯನಾಡಿದನುಂಜಲಂ ತಾಂ ॥ ೩ ॥ ಮೌನೀಂದ್ರಮಾನಸ
ಸರೋರುಹವಾರಸೂರಂ | ದೀನಾವನೈಕ ನಿರತಂ ಕರುಣಾಂ
ಬು ಪೂರಂ ॥ ಧೀರಾ ಮರಾರ್ತಿ ಹರಣೈಕ ಕೃತಾವತಾರಂ |
ಘೋರಾಘಚೋರನಖಿಲಾಗಮಗೇಯಸಾರಂ ॥ ೪ ॥ ಭೂಮಿ
ಸುರಾಧಿಪತಿ ಚಾಮನೃಪಾಲಪಾಲಂ | ಶ್ರೀಮಾಸಮೇತ ನಖಿ
ಲಾವನಲೋಲಶೀಲಂ ॥ ಹೇಮಾಂಬರಾಂಚಿತ ಮನೋಹರ
ನೈಜ ದೇಹಂ | ಸೋಮಾ ಭಿರಾಮ ನಯನಂ ಜಯ ನಾರ
ಸಿಂಹಂ ॥ ೫ ॥

ಉಯ್ಯಾಲೆಯ ಹಾಡು.

ರಾಗ—ಶಂಕರಾಭರಣ. ರೂಪಕತಾಳ.

ಉಂಜಲಾಡಿದನುವರಕಂಜಾಕ್ಷನು ॥ ಪ ॥ ನೀರೇಜ
ನೇತ್ರೆಯರು | ಸೇರುತೊಂದೆಡೆಯಲ್ಲಿ | ಚಾರು ಕೈಯಿವಲ
ಗಳಿಗೊಹೀರಫಲಕವನು | ಸೇರಿಸುತ ಕಟ್ಟುತ್ತು | ಲಾರವನು
ಹಾಸುತ್ತ | ಧಾರಿಣೀ ಸುತೆ ರಾಮರನು ಕೂಡಿಸಲ್ ॥ ೧ ॥

ಮಂಗಳಾಂಗಿಯ ರೆಲ್ಲ | ಮಂಗಳ ದ್ರವ್ಯಗಳ | ಮುಂಗಡೆ ಯೊಳಿರಿಸುತ್ತ | ಸಂಗೊಳಿಸಲು | ತುಂಗತರ ವಾದ್ಯಂಗ | ಳಂ ಗಳದಿ ಭೋರ್ಗರೆಯ | ಲಂಗನೆಯ ರಾಗಗಾ | ನಂಗಳನು ಮಾಡಲ್ ‖ ೨ ‖ ನಾಗವೇಣಿಯರೆಲ್ಲ | ತೂಗು ಮಣೆಯನು ಪಿಡಿದು | ತೂಗುತಿರಲು ಮನೋಜ್ಞ | ರಾಗಗಳನು | ಆಗಳ ನುರಾಗದಿಂ | ಬೇಗಬೇಗದೊಳೆ ಸೊಗ | ಸಾಗಿ ಪೇಳುತ್ತಿ ರಲು | ನಾಗಶಯನಂ ‖ ೩ ‖ ಪಾರ್ವಣಶಶಾಂಕರುಚಿ | ಗರ್ವ| ಹರಮುಖರದೇವ | ಪರ್ವತೋದ್ಧರಣೈಕ | ಧೂರ್ವಹಸುಭಾವ ಶರ್ವದರ್ವೀಕರ ಸು | ಪರ್ವನುತ ಗುಣ ಧಾಮ | ಸರ್ವಂಸಹಾ ಕಾಂತ | ಸರ್ವೋತ್ತಮ ‖ ೪ ‖ ಅರಳಸರಿಯನುಸು ರರು | ಸುರಿಯುತಿರೆರಂಭಾದಿ | ಸುರಸತಿಯರೆಲ್ಲ ನರ್ತಿಸುತಿರಲು ಮೌನಿ | ವರರೆಲ್ಲ ಜಯವೆಂದು | ಕರವೆತ್ತಿ ಪೊಗಳುತಿರೆ | ಹರಿಸದಿಂದಾಗಜಯನರಸಿಂಹನು ‖ ೫ ‖

## ಉಂಜಲಾಡುವ ಕಾಲದಲ್ಲಿ ಹೇಳುವ ಹಾಡು.

ರಾಗ—ನೀಲಾಂಬರಿ. ಆದಿತಾಳ.

ಶ್ರೀರಾಮಜೋಜೋ | ಶ್ರಿತಗುಣಜೋಜೋ ‖ಪ ಧೀರಾಪಾರೋದಾರ | ಕರುಣಾಕರನಿರುಪಮಪರ | ವೀರ ಶೂರವರ|ಹಾರಮನೋಹರ ‖ಅ‖ ಸಿರಿಸರಸತಿಗಿರಿ | ವರಸುತೆ ಯರುಕೂಡಿ | ಹರಿಸದಿಮಾತಾಡಿ | ಕರೆಯಿಸಿಸುರನರಕಿನ್ನ ರಸತಿಯರನು ‖ ಸರಸವಾಗಿ ಮಾತಾಡಿಸಿ ಮನ್ನಿಸಿ | ವರಸತಿ

ಯರನುಪಚರಿಸುತ ಕೂಡಿಸಿ ॥ ೧ ॥ ನಿಪುಣರ ಕರೆಯಿಸಿ । ವಿಪುಲರತ್ನತತಿಯಿಂ। ಮಂ। ಟಪವನು ಕಟ್ಟಿಸಿ । ತಪನನಂತೆ ರಂಜಿಪ ತೋರಣಚಯವಂ । ಆ ಚಪಲೆಯರ್ಕಟ್ಟಿಸಿ ॥ ಸುಪ ಮಳ ಸುಮಮಾಲೆಯ ಬಿಡಿಸುತ । ಅಪಮಿತದ ಸನ್ನಾಹವ ಮಾಡುತ ॥೨॥ ಮಂಗಳಾಂಗಿಯರು । ಮಂಗಳವನುಮಾಡೆ। ಸಂಗೀತವ ಪಾಡೆ । ತುಂಗಹೀರ ಮಣಿ ಸಂಗತ ಪೀಠವನು । ಸಿಂಗರಿಸುತ ಲದನು ॥ ಅಂಗನೆ ಜಾನಕಿ । ಯಂಗಜ ಪಿತರ ಬೆ । ಡಂಗಿಂಕೂಡಿಸಿ । ಪಿಂಗದೆತೂಗಲು ॥ ೩ ॥ ದೇವಾಂಗನೆ ಯರುನರ್ತನವನು ಮಾಡೆ,। ಭಾವಕಿಯರು ಪಾಡೆ । ಅವರ ಮಂತ್ರವನುಚ್ಚರಿಸುತೆಬುಧರ। ದೇವನ ಪರಸುತ್ತಿರೆ । ತೀವಿದ ಮಂಗಳವಾದ್ಯವಿಶೇಗ । ಳಾವಿಧದಿಂ ಮೊಳಗುತ್ತಿರಲಾಗ ॥೪॥ ಬೇಗನೆಪಿಡಿಯುತ । ತೂಗುಮಣೆಯಕೆಲರು। ಘನ।ರಾಗವಪಾಡುತ । ಲಾಗ ಕೆಲರು ಮುಂ । ಭಾಗದೊಳೈತರುತ । ಬಾಗುತ ನಮಿಸುತ್ತ ॥ ನಾಗವೇಣಿಯರು ರಾಗದಿತೂಗಿದ।ರಾಗಮನುತ ವರ । ಸಾಗರಶಯನನ ॥೫॥ ತರುಣತರಣಿಕಿರಣಾರುಣ ವರ ಚರಣ।ಧರಣೀವರಸದ್ಗುಣ।ಚರಣ ಶರಣಭರಣಾದೃತ ಗುರು ಕರುಣ । ವರ ವಿತರಣನಿಪುಣ ॥ ಸುರವರಮುನಿಗಣ ರಕ್ಷಣ ದಕ್ಷಿಣ । ಪರಭಕ್ತಜನಾದರಣವಿಚಕ್ಷಣ ॥ ೬ ॥ ಸೋಮ ಸದೃಶ ವರ। ಧಾಮ ವದನರಾಮ । ಭೂಮಿಾ ನವಕಾಮ । ಸಾಮವೇದ ನುತ।ಭೂಮಸುಗುಣಧಾಮ । ಸೋಮ ಸ್ತುತ ನಾಮ ॥ ತಾಮಸಿಚರ।ಸ್ತೋಮ ವಿನಾಶಕ। ಭೂಮಿಸುತಾ ಸುಪ್ರೇಮನಾಯಕ ॥೭॥ ಖಂಡಿತಚಂಡಾರಾತಿ । ಷಂಡದೋ

ರ್ಗಂಡ | ಮಂಡಿತಕೋದಂಡ|ಚಂಡಭಾನುಕುಲ | ಮಂಡನ ಮಣಿಭಾಂಡಾ | ಖಂಡಲನುತಶೌಂಡ || ಪುಂಡರೀಕ ನಯ| ನಾಂಡಜವಾಹವಿ | ಧ್ಯಂಡಪಾಲಗುಣ|ಮಂಡಲಮಂಡಿತ ೮|| ಇನಕುಲ ವಾರಿಧಿ ಸೋಮ ಪೂರ್ಣಕಾಮ | ವನಜಾನನ ರಾಮ | ಜನಕಸುತಾ ವದನಾಂಬುಜ ಭಾಸ್ಕರನೆ | ಮನು ವಂಶ ಕುಮಾರನೆ | ವಿನಯಾನ್ವಿತನೆ | ದನುಜಕುಲಾಂತಕ ಹನುಮದೀಡ್ಯಜಯಮನುಜಸಿಂಹನೆ || ೯ ||

ಉಂಜಲದ ಹಾಡು.

ರಾಗ—ಮುಖಾರಿ, ಆದಿತಾಳ.

ಜೋಜೋ ಶ್ರೀಲೋಲ| ಜಯಗೋಪಾಲ | ಜೋ ಜೋ ಮುನಿಪಾಲ | ಜೋಜೋ ನೀಲಾಭ್ರಸನ್ನಿಭ ನೀಲ | ಜೋಜೋ ವರಶೀಲ || ರಾಜೀವೇಕ್ಷಣ | ರಾಜರಾಜಸುರ | ರಾಜೇಡಿತಪದ | ರಾಜಾನನನೆ || ಅ || ಹೀರಾದಿನೂತ್ನರತ್ನ ಪ್ರಚಯ | ರಾರಾಜಿತವಾದ | ಚಾರುಮಂಟಪವಕಟ್ಟಿಸುತ್ತ | ಸಾರಸಾಕ್ಷಿಯರು || ತೋರ ಮುತ್ತುಗಳ | ತೋರಣಗಳ ವೈ | ಯ್ಯಾರದಿ ಕಟ್ಟುತ | ನಾರಿಯರೆಲ್ಲರು || ೧|| ಎಸೆ ಯುತ್ತಿರುವನೀಲದಮಣಿಯ | ಸರಪಳಿಗಾಪರಿಯ | ಮಿಸು ನಿಯುಹಸೆಯಮಣೆಯನುಕಟ್ಟಿ | ಸರಿಗೈಯುತತಟ್ಟಿ || ಅಸ ಮಸದೊಳಗಾಸ್ತರಣವ ಹಾಸುತ | ಬಿಸಜಾಕ್ಷಿಯರದ ಸರಿ ಮಾಡುತ್ತ || ೨ || ಜಾತೀ ಮಲ್ಲೀ ಮತಲ್ಲೀ ಚಂಪಾ |

ವೆಕುಳಾದಿಸೊನ । ಜಾತವನಿರದೆಕಟ್ಟಿತೊಲವಿಂ । ಸಿಂಗರಿಸುತಲಾಗ ॥ ಶಾತಕುಂಭ ಯುತವರ್ಮಣಿಮಂಟಪವ । ಆತುರದಿಂ ಸಂಗೊಳಿಸುತ ಮುದದಿಂ ॥ ೩ ॥ ಸ್ತುತಿಸುತ್ತಲಿರಲು ಮಾಗಧರೆಲ್ಲ । ರಂಭಾದಿಗಳೆಲ್ಲ । ಅತಿರಮ್ಯವಾಗಿನರ್ತಿಸುತಿರಲು । ಮಂಗಳವಾದ್ಯಗಳುಂ ॥ ವಿತತವಾಗಿ ಭೋರ್ಗರೆಯುತಿರಲ್ಕ । ಚ್ಯುತನನು ಬಲು ಬಗೆಯೊಳುಂ ಸಿಂಗರಿಸಿ ॥ ೪ ॥ ಮಣಿವಾರಖಚಿತನವತಾಟಂಕ । ವನ್ನಿಡುತಲಿ ವರಕಂ । ಕಣಹೀರಕಾರುಹಾರನಾನಾ । ಭರಣಗಳನುಧರಿಸಿ॥ ಮಣಿಮಯಕಾಂಚೀ ಕಿಂಕಿಣಿಯಿಂದಲಿ । ಫಣಿವೇಣಿಯು ರುಕ್ಮಿಣಿಯು ಸಿಂಗರಿಸೆ ॥ ೫ ॥ ಉಲ್ಲಾಸದಿಂದ ಲಾ ಶ್ರೀಹರಿಯು । ನಲ್ಲೆಯಕೈವಿಡಿದು । ಮೆಲ್ಲಮೆಲ್ಲನೆಮುಂದಡಿಯಿಡುತ । ಅಲ್ಲಿಗೈತರುತ ॥ ಸಲ್ಲಲಿತಾಂಗಕನುಯ್ಯಾಲೆಯೊಳಾ । ವಲ್ಲಭೆಯೊಡನೈತಂದು ಕುಳಿತಿರಲು ॥ ೬ ॥ ನಾಗಾಧಿರಾಜವೇಣಿಯರಾಗ । ಇಂಚರದೊಳುಪಾಡೆ । ತೂಗಿದರಾಗಲನುರಾಗದೊಳುಂ । ವರಹರ್ಷವು ಮೂಡೆ ॥ ನಾಗಶಯನವರಜಯನರಸಿಂಹನ । ಬೇಗದೆಪಾಡುತತೂಗಿದರಾಗ ॥ ೭ ॥

ಉಯ್ಯಾಲೆಯಮೇಲೆ ಕುಳಿತಿರುವಕಾಲದಲ್ಲಿ
ಆರತಿ ಎತ್ತುವ ಹಾಡು.

ರಾಗ—ಮಧ್ಯಮಾವತಿ. ಆದಿತಾಳ.

ಅದ್ವೈತೇಯನನ್ನು ಕೊಂದು । ವೇದವನ್ನು ತಂದು ವಿಧಿಗೆ । ಮೋದದಿಂದಕೊಟ್ಟುಜಗ । ದಾದಿವಿಗಾನಾವತಾರಿಗೆ ॥

ಐದೆಯರಾರತಿಯ ಬೆಳಗಿರೆ ‖ ೧ ‖ ಸಾರಮಂದರಾಚಲದ ।
ಭಾರವನ್ನು ಪೊತ್ತುದೇವ । ವಾರವನ್ನು ಪಾಲಿಸಿರ್ಪ । ವೀರ
ಕೂರ್ಮಾವತಾರಿಗೆ ‖ ಹೀರದಾರತಿಯಬೆಳಗಿರೆ ‖ ೨ ‖
ಖೂಳನ ಸಂಹರಿಸಿ ಕಂದ । ಮೂಲಗಳ ತಿಂದು ಧರೆಯ ।
ಮೇಲಾಗುದ್ಧರಿಸಿಮೆರದ । ಲೀಲಾಕೋಲಾವತಾರಿಗೆ ‖ ನೀಲ
ದಾರತಿಯಬೆಳಗಿರೆ ‖ ೩ ‖ ದುರುಳನುರವಬಗೆಯುತವನ ।
ಕರುಳಸರವ ಕೊರಳೊಳುಧರಿಸಿ । ಪರಮಭಕ್ತ ಪ್ರಹ್ಲಾದ
ನಿಗೆ । ವರವನಿತ್ತಾನರಸಿಂಹಗೆ ‖ ಮರಕತದಾರತಿಯ ‖ ೪ ‖
ಮೂರಡಿನೆಲವಬೇಡು । ತ್ತಾರಡಿಯಾಗುತಾಬಲಿ । ಧಾರುಣಿ
ಯೊಳ್ಮೆಟ್ಟೆಬ್ರಹ್ಮ । ಚಾರಿಯಾದಾ ವಾಮನಂಗೆ । ನಾರಿಯ
ರಾರತಿಯ ‖ ೫ ‖ ಜನಕನಾಜ್ಞೆಯಿಂದ ತನ್ನ । ಜನನಿಯ
ಮೌಳಿಯತರಿದು ೞನಪ ವಂಶಾವಳಿಯ ಮುರಿದ । ವಿನುತ
ಪರಶುರಾಮಗೆ ‖ ಕನಕ ದಾರತಿಯ ‖ ೬ ‖ ತಾತನಾಜ್ಞೆ
ಯಿಂದ ವನವ । ಸೀತೆಯೊಡಗೂಡಿ ಪೊಕ್ಕು । ದೈತೇಯನ
ಕೊಲ್ಲುತಸಾ । ಕೇತವ ನಾಳಿದ ರಾಮಗೆ ‖ ನೂತನದಾರತಿ
ಯ ‖ ೭ ‖ ಘೋರಾಘ ಹಾರಗೆಭಕ್ತ । ವಾರಕಂಗ ಸಂಗವಿ
ತ್ತು । ಕ್ರೂರನಾದಕಂಸನಸಂ। ಹಾರವನ್ನುಗೈದಕೃಷ್ಣಗೆ‖
ಹೀರದಾರತಿಯ ‖ ೮ ‖ ಸಿದ್ಧಜನರನ್ನು ಪೊರೆಯೆ । ಬದ್ಧಾ
ದರನಾಗಿ ವೇದ । ಪದ್ಧತಿಯ ನಿಂದಿಸಿ ಪ್ರ । ಬುದ್ಧನಾದಾ ।
ಬುದ್ಧ ರೂಪಿಗೆ ‖ ಉದ್ಧವದಾರತಿಯ ‖ ೯ ‖ ಉತ್ತಮಾಶ್ವ
ವೇರಿಕೊಲುತ । ಮತ್ತಯವನಕುಲವಭಕಾ । ಪತ್ತಿಯ
ಪೋಗಾಡಿಸಿ । ದುತ್ತಮ ಶ್ರೀಜಯನೃಹರಿಗೆ ‖ ಮುತ್ತಿನಾ
ರತಿಯಬೆಳಗಿರೆ ‖ ೧೦ ‖

## ಬಾಗಿಲು ತಡೆಯುವಹಾಡು.

ರಾಗ—ಖರಹರಪ್ರಿಯ. ರೂಪಕತಾಳ

೧ ತೆಗೆತೆಗೆಬೇಗದಿಂದ ಬಾಗಿಲನ್ನು ತೆಗೆಯೆ ನೀಂ ॥ ಪ ॥
೨ ತೆಗೆತೆಗೆಬೇಗದಿಂದ ಬಾಗಿಲನ್ನು ತೆಗೆಯೆನಾಂ ॥ ಪ ॥
ಸಾಕು ಸಾಕು ಬಿಡುಬಿಡೀ| ಕಾಕುತನವಿದೇಂ ನುಡಿ | ಹಾಕಿ
ಕೊಂಡೆ ಬಾಗಿಲನ್ನು| ದೇಕೆಕೋಕಿಲಾರವೆ ॥ ತೆಗೆತೆಗೆಬೇಗ
ದಿಂದ ಬಾಗಿಲನ್ನು ತೆಗೆಯೆ ನೀಂ ॥ ೧ ॥ ಚೋರನಂದದಿಂದ
ಬಂದು | ದ್ವಾರದೇಶದಲ್ಲಿನಿಂದು | ವಿಚಾರಿಕೂಗುತಿರುವೆನೀ |
ನಾರುಹೇಳುಹೇಳೆಲೋ ॥ ತೆಗೆತೆಗೆ ಬೇಗದಿಂದಬಾಗಿಲನ್ನು
ತೆಗೆಯೆ ನಾಂ ॥ ೨ ॥ ಮಂದನಾದ ಸೋಮಕನನು |
ಕೊಂದುವೇದವನ್ನು ತಂದು | ಅಂದು ಕಮಲಭವನಿಗಿತ್ತು |
ಬಂದ ಮೀನರೂಪಿ ನಾಂ ॥ ತೆಗೆತೆಗೆ ॥ ೩ ॥ ಮೀನನಾಗೆನದಿ
ಗಳಲ್ಲಿ| ನೀನು ಮುಳುಗಿ ಬದುಕೆಲೋ | ಮಾನವತಿಯ
ಸದನದಲ್ಲಿ| ಏನು ನಿನಗೆ ಕಾರ್ಯವು ॥ ತೆಗೆ ತೆಗೆ ॥ ೪ ॥
ಅಂದು ಮಂದರಾದ್ರಿಯನ್ನು | ಚಂದದಿಂದ ಪೊತ್ತು ದೇವ |
ವೃಂದವನ್ನು ಕಾಯ್ದು ಸದಾ | ನಂದ ಕೂರ್ಮ ರೂಪಿ ನಾಂ ॥
ತೆಗೆ ತೆಗೆ ॥ ೫ ॥ ಗುಡ್ಡವಾಂತಕಾರಣದಿಂ | ವಡ್ಡರವನೆ ನೀ
ಸುಖಿ | ದೊಡ್ಡಕಲ್ಲುಕೆಲಸವಿಲ್ಲಿ | ಹೆಡ್ಡನಿನಗೆದೊರೆಯದು ॥
ತೆಗೆತೆಗೆ ॥ ೬ ॥ ಕ್ರೂರಹಿರಣ್ಯಾಕ್ಷಸಂ| ಹಾರವೆಸಗಿಧಾರುಣಿ
ಯನು | ದ್ಧಾರವನ್ನು ಮಾಡಿದ ಭೂ | ದಾರ ರೂಪಿ ನಾ
ನೆಲೆ ॥ ತೆಗೆತೆಗೆ ॥ ೭ ॥ ಕೋರೆಹಂದಿಯಾಗೆನೀನು | ಧಾರು

ಣಿಯನು ಕೆರೆದು ಕೊಂ । ನ್ನಾರಿಗೆದ್ದಿ ತಿನಲುಕಾಂ । ತಾರ ತಟಕೆಸಾರೆಲೋ । ತೆಗೆ ॥ ೮ ॥
ಅರ್ಭಕನೆಂದಳಲುವಸಂ । ದರ್ಭವನ್ನು ಕೇಳಿ ಖಲನ । ಗರ್ಭವಸಿರ್ಭೇದಿಸಲಾ । ವಿರ್ಭವಿಸಿದನೃಹರಿನಾಂ। ತೆಗೆತೆಗೆ ॥ ೯ ॥ ನಿನ್ನ ಘೋರರೂಪದ ಬಗೆ । ಯನ್ನು ಕೇಳುತೆನ್ನ ಮನವು । ಉನ್ನತಭೀತಿಯನುತಳೆದು । ದಿನ್ನು ಗಮಿಸು ವಿಪಿನಕೆ ॥ ತೆಗೆ ತೆಗೆ ॥ ೧೦ ॥ ಧಾರುಣೀಯ ದಾನವನ್ನು । ಮೂರು ಪದವ ಬೇಡಿದಾ । ಧೀರ ನಾದ ವಾಮನಾ । ಕಾರಿ ಬ್ರಹ್ಮಚಾರಿನಾಂ ॥ ತೆಗೆ ತೆಗೆ ॥ ೧೧ ॥ ಸಾರವೇದ ಮಂತ್ರಗಳನು । ದಾರವಾಗಿಗುರುಗಳೆಡೆಯೊಳ್ । ವಿಚಾರಿಪಠಿಸುತಿರ್ಪ ಬ್ರಹ್ಮ । ಚಾರಿ ಗಿಲ್ಲಿ ಕೆಲಸ ವೇಂ ॥ ತೆಗೆ ತೆಗೆ ॥ ೧೨ ॥ ತಾತನಾಜ್ಞೆಯಿಂದ ಕೊಂದು । ಮಾತೆಯನ್ನು । ದುಷ್ಟ ರಾಜ । ಜಾತನಾಶಕೃತ್ಕಠಾರ । ಭೂತಪರಶುರಾಮನಾಂ ॥ ತೆಗೆತೆಗೆ ॥ ೧೩ ॥ ಮಾತೆಯುತ್ತಮಾಂಗವನ್ನು । ಘಾತಿಸಿರ್ಪದುಷ್ಟಮಹಾ । ಪಾತಕಿ ನಿನ್ನನ್ನು ನೋಡೆ । ಭೀತಿ ಪಡುವೆ ನಬಲೆ ನಾಂ ॥ ತೆಗೆ ತೆಗೆ ॥ ೧೪ ॥ ಜಟೆಯು ಧರಿಸಿ ಕಾಂತಾರ । ತಟದಿ ಸಂಚರಿಸುತ ಪಂಚ । ವಟಿಯೊಳ್ವಾಸ ವನ್ನುಗೈದ । ಚಟುಲರಾಮಚಂದ್ರನಾಂ ॥ ತೆಗೆ ತೆಗೆ ॥೧೫॥ ತಪಸಿಯಾಗಿಸರ್ವಮಂತ್ರ । ಜಪದ ಸಿದ್ಧಿಯನ್ನು ಪಡೆಯೆ । ವಿಪುಲಯಮಿಗಳಾಶ್ರಯಕ್ಕೆ । ನಿಪುಣಮತಿಯೆತೆರಳುನೀಂ। ತೆಗೆ ತೆಗೆ ॥ ೧೬ ॥ ಶೈಲವರವ ನೆತ್ತಿ ಗೋ । ಪಾಲರನ್ನು ಪಾಲಿಸುತ್ತ । ಹಾಲುಮೊಸರುಕುಡಿದುಬಳೆದ । ಬಾಲಗೋ

ಪಾಲನಾಂ ॥ ತೆಗೆತೆಗೆ ॥ ೧೭ ॥ ಗೊಲ್ಲ ನೀನಾಗೆ ನಿಶಿಯೊ ಳಲ್ಲಿಕೆಲಸವೇನುಪೇಳ್ ।ನಿಲ್ಲದೆ ಬಾರುದಯಕಾಲ । ದಲ್ಲಿ ಪಶುವಬಿಡುವೆನಾಂ ॥ ತೆಗೆ ತೆಗೆ ॥ ೧೮ ॥ ಮತ್ತ ಕಾಶಿನಿಯರು ನಿಯಮ । ವೆತ್ತು ಮಾಳ್ಪವ್ರತವಕೆಡಿಸ । ಲತ್ತಲೆ ಪೋಗುತ್ತಿ ನಿಂ । ತುತ್ತಮ ಗುಣ ಬುದ್ಧನಾಂ ॥ ತೆಗೆ ತೆಗೆ ॥ ೧೯ ॥ ಲಜ್ಜೆ ಕೆಟ್ಟ ಬುದ್ಧನಾಗೆ । ಸಜ್ಜನ ಸಹವಾಸ ವೆಂತು । ಸಜ್ಜಿಸು ವದುಪೇಳ್ವದಿತ್ತ । ಹೆಜ್ಜೆಯಿಡದೆಸಾರು ನೀಂ ॥ ತೆಗೆತೆಗೆ ॥ ॥ ೨೦ ॥ ಚಾರುಹಯವನೇರಿಯವನ । ವಾರವನ್ನು ಸಂಹರಿ ಸುತ । ಧಾರುಣಿಯೊಳು ಚರಿಸಿ ಬಂದ । ವೀರ ಕಲ್ಕಿ ರೂಪಿ ನಾಂ ॥ ತೆಗೆ ತೆಗೆ ॥ ೨೧ ॥ ಹಾಗೆ ನೀನು ವೀರ ವರ್ಯ । ನಾಗಿರಲ್ಕೆ ಕಾಮಿನಿಯರೊ । ಳಾಗ ತಕ್ಕುದೇನು ಯುದ್ಧ । ವಾಗುವೆಡೆಗೆಪೋಗುನೀಂ ॥ ತೆಗೆತೆಗೆ ॥ ೨೨ ॥ ಕನ್ನೆ ಮನ್ನಿ ಸೆನ್ನ ಮುನ್ನ । ವಿನ್ನು ತಡವಮಾಡಬೇಡ । ನನ್ನಿಯ ಮನ ದನ್ನನಾ । ದುನ್ನತಗುಣಕೃಷ್ಣನಾಂ ॥ ತೆಗೆ ॥ ೨೩ ॥ ಅಂಗ ನೆಬಾಗಿಲನು ತೆಗೆಯು । ತಂಗಜಪಿತ ಗೊಂದಿಸುತ್ತ । ಮಂಗ ಳಾಂಗಿಮನ್ನಿಸಿದಳು । ತ್ತುಂಗಜಯನ್ನೃಹರಿಯನು ॥ ೨೪ ॥

## ಬಾಗಿಲು ಕಟ್ಟುವ ಹಾಡು.

ರಾಗ—ಸೌರಾಷ್ಟ್ರ. ಆದಿತಾಳ

ಶ್ರೀಕರಮುಖಜಿತರಾಕೇಂದುಬಿಂಬೆತತ । ಕಾಕೋ ದರೋಜ್ವಲ ವೇಣೀ ॥ ರಾಣೀ ॥ ಕಾಕುಚರ್ಯವ ಬಿಡು । ನೀ ಕರುಣವ ಮಾಡು । ಸಾಕು ಬಾಗಿಲ ತೆಗೆ । ಭಾಮೆ । ರಾಮೆ ॥ ೧ ॥

ಧೀರನಂದದೊಳಿಂದು । ದ್ವಾರದೇಶಕೆಬಂದು । ಚೋರ
ನಂದದಿಕೂಗುತಿರುವೆ । ತರವೆ ॥ ಮೀರಿ ಮರ್ಯಾದೆಯ ।
ನೀರೀತಿ ಮಾಡೆ ಭಯ । ತೋರದೆ ಸಾಕು ಪೋ ಪೋಗು ।
ಸಾಗು ॥ ೧ ॥

ಆಲೋಲಾಲಕಭಾರೆ । ಜಾಲವಬಿಡುಚದುರೆ । ಬಾಲೇಂ
ದುಸನ್ನಿಭಫಾಲೆ । ಬಾಲೆ ॥

ನೀಲತೋಯದನಿಭ । ನೀಲಗೋಪಾಲಶುಭ । ಶೀಲವ
ಲ್ಲವೀವನವಸಂತ । ಕಾಂತ ॥ ೩ ॥

ಏನೆಕೋಪವ ಭಾವೆ । ನೀನಾನೆ ಚಂದವೆ । ಮಾನಿನಿ
ಬಿಡು ಕೋಪವನ್ನು । ಇನ್ನು ॥

ದೀನಪಾಲಕ ಯನ್ನ । ನೂನುಕೋಪದಿ ಮುನ್ನ ।
ಊನವು ನಿನಗೇನು ಹೇಳು । ಕೇಳು ॥ ೪ ॥

ಕೋಪವ ನೀ ನಾನೆ । ತಾಪವೆನ ಗಲ್ಲವೇನೆ । ಚಾ
ಪಲಾಯುತ ಚಾರು ನಯನೆ । ಏನೆ ॥

ಭಾಪುನಿನ್ನಸಂತಾಪ । ದಾಪರಿಯನುಭಿಪ । ಏಪೇಳ್ವೆ
ಬಲ್ಲೆ ನಿನ್ನ ಗುಣವ । ದೇವ ॥ ೫ ॥

ಅಪರಾಧವೇ ನನ । ನುಪಮೆ ಗೈದಿರುವೆ ನಾಂ । ಚಪಲ
ಸುಭ್ರೂಜಿತಚಾಪೆ । ಓಪೆ ॥

ಸುಪವಿತ್ರವಿಧಿ ಯೆನಗೆ । ವಿಪರೀತ ತಾನಾಗೆ । ಅಪರಿ
ಮಿತಾಗವು ಯನ್ನೊಳಗೆ । ಹಾಗೆ ॥ ೬ ॥

ಅಂತಾಗ ಲಿಂತುಚಿಂತೆ । ಯಾಂತುದೇತಕೆ ಕಾಂತೆ ।
ನೆುುಂತೆಗದ್ಗದಿಸಿದುಃಖಿಸುವೆ । ಭಾವೆ ॥

ಅಂತಸ್ಥವರಿಯುದೆ । ಭ್ರಾಂತ ನೀನೇನೊರೆದೆ । ಪಂತದಿ
ಶೋಕವಾರಮುಂದೆ । ಗೈದೆ ॥ ೭ ॥

ಘನತರಪೀನಜಘನೆ । ವಿನುತಸನ್ಮತಿ ನೀನೆ । ವನಿತೆ
ಶೋಕಿಪುದೇಕನ್ನಮುಂದೆ । ಇಂದೆ ॥

ಅನಿತುಶೋಕಿಸಲಾನು । ನಿನಗೀಗೇನಪೆನು । ವನಜನ
ಯುನದಯೆದಾಳು । ಹೇಳು ॥ ೮ ॥

ಪ್ರಾಣನಾಯಕಿ ನೀನು । ಜಾಣೆಯುನಗಲ್ಲವೇನು ।
ಮಾಣದುಸುರುಕೋಪಧಾಮೆ । ಭಾಮೆ ॥

ಪ್ರಾಣಕಾಂತೆಯಾಗಿಲ್ಲ । ದಣಿಯುಕೇನಲ್ಲ । ಮೇಣಿಳ
ಲ್ವೆನು ಬೇಗ ನಾನು । ಇನ್ನು ॥ ೯ ॥

ಯಾಸಾಸಾರಸನೇತ್ರೆ । ಭಾಸುರಮೃದುಗಾತ್ರೆ । ಏಸಂ
ಗತಿಯೊದುಃಖಕೆಕಾಣೆ । ಜಾಣೆ ॥

ಆವಸತಿಗೆ ಮುಡಿಸಿದ । ಕೌಸುಮವಾಂತಕರದ । ವಾಸ
ನೆಸೈಸೆನು ಪೋಗು । ಸಾಗು ॥ ೧೦ ॥

ಭಾಸುರಾಂಗಿಯೆ ನಲ್ಲೆ । ವಾಸಿಬಂದುದ ಬಲ್ಲೆ । ಏಸಾ
ಸಲಾದಾಸುಮವೀವೆ । ಭಾವೆ ॥

ಏನೆಂದು ಪೇಳ್ವೆನಿನ್ನ । ಯಾಸತ್ಯ ವಾಕ್ಯವನ್ನಾ ।
ಮೋಸಗಾರಿಕೆಇದುಸಲ್ಲ । ನಲ್ಲ ॥ ೧೧ ॥

ಸುರಪಾರಿಜಾತವ । ತರಿವನಿನ್ನಯಧವ । ಸುರಪಾರಿ
ಜಾತವತಂದೀವ । ಕಾವ ॥

ಸುರಲೋಕದಲ್ಲಿರುವ । ತರುವ ನೀಪೋಗಿ ತರುವ ।
ತೆರನದೆಂತುಟೋನಾನರಿಯೆ । ಹರಿಯೆ ॥ ೧೨ ॥

ಮುರ ನರಕರ ಕೊಲೆ । ಸುರಲೋಕಕೆ ತೆರಳೆ । ತ
ರುಣಿಕಲ್ಪತರುವತರುವೆ । ಕೊಡುವೆ ॥
ಹರಿಯೊರೆದುದಕೇಳಿ । ತರುಣಿಹರ್ಷವತಾಳಿ । ತೆರೆದು
ಬಾಗಿಲಪದಕೆರಗೆ । ಹಾಗೆ ॥ ೧೩ ॥
ಮುಡಿಪಡವೃತಮುದ್ದ । ನಿಡಲುಸಂತೈಸಲೆದ್ದ । ಮಡದಿ
ಯುಬಿಗಿದಪ್ಪ ತಂದು । ಬಂದು ॥ ಕಡುಸೊಗವಾಂತ ನಾ।
ಮಡದಿಯೊಡನೆ ಜಗ । ದೊಡೆಯ ಜಯ ನರಸಿಂಹ
ನಾಗ । ಬೇಗ ॥ ೧೪ ॥

## ಬಾಗಿಲು ಕಟ್ಟುವ ಹಾಡು.

ರಾಗ—ಜಂಜೋಟಿ. ರೂಪಕತಾಳ.

(೧) ಬಾಗಿಲನ್ನು ತೆಗೆಯೆ ನೀಂ । ನಾಗ ವೇಣಿಯೆ ॥ ಪ ॥
(೨) ಬಾಗಿಲನ್ನು ತಗೆಯೆ ನಾಂ । ನಾಗ ಶಾಯಿಯೆ ॥ ಪ ॥
ಈಪರಿಯೊಳಗೇಕೆಕಾಂತೆ । ಕೋಪವಾಂತೆ ॥ ಓಪ ನಾ
ನುಬಂದು ನಿಂತೆ । ನೋಪೆ ಕಾಂತೆ ॥ ೧ ॥
ಚೋರನಂದದಿಂದಲಿಂದು । ಸಾರಿ ಬಂದು ॥ ವಿಾರಿ ಕೂ
ಗಬೇಡ ತಾಳು । ಯಾರು ಹೇಳು ॥ ೨ ॥
ದಾನವನನು ನಿಗ್ರಹಿಸುತ । ನೂನವೇದವ ॥ ಸೂನು
ವಾದಬೊಮ್ಮಗಿತ್ತ । ಮಿಾನರೂಪಿ ನಾಂ ॥ ೩ ॥
ಮಿಾನನಾಗೆ ನಿನಗೆಯೆಂವ್ಕೊ । ಳೇನು ಕಾರ್ಯವು ॥
ಸಾನುರಾಗದಿಂದಗಮಿಸು । ನೀನುಮಡುವಿಗೆ ॥ ೪ ॥

ಕೂರ್ಮೆಯೊಳಾಸುಮನಸರ್ಗೆ । ಶರ್ಮವೆಸಗಲು ॥
ಪೇರ್ಮೆಯಿಂದಗಿರಿಯತಳೆದ । ಕೂರ್ಮರೂಪಿನಾಂ ॥ ೫ ॥

ಬಳ್ಳಿತೊಳ್ಳಿತಿಲ್ಲಿ ನೀನು । ಕಲ್ಲುಕೆಲಸವ । ಬಲ್ಲವನಾ
ಗಿರೆನೃಪಾಲ । ರಲ್ಲಿಗೆಪೋಗು ॥ ೬ ॥

ಕ್ರೂರಹಿರಣ್ಯಾಕನಕೊಂದು । ಕೋರೆದಾಡೆಯೋಳ್ ॥
ಧಾರುಣಿಯನುಧರಿಸಿದಭೂ । ದಾರರೂಪಿನಾಂ ॥ ೭ ॥

ಹಂದಿಯಾಗೆ ನೀನು ವನವ । ಪೊಂದುತಲ್ಲಿನ ॥ ಕಂದ
ಮೂಲಾದಿಗಳನು । ತಿಂದುಬಾಳುನೀಂ ॥ ೮ ॥

ವೈರಿಯುರವಭೇದಿಸುತ್ತ । ತೋರ ಕರುಳನ ॥ ಹಾರ
ವನ್ನುಕೊರಳೊಳಾಂತ । ನಾರಸಿಂಹನಾಂ ॥ ೯ ॥

ಈನವೀನರೂಪದಿರವ । ನಾನು ಕೇಳ್ ॥ ಜ್ಞಾನಗೆಟ್ಟೆ
ನೆಕಟಪೋಗು । ಕಾನನಾಂತಕೆ ॥ ೧೦ ॥

ಇಳೆಯಬೇಡಿಬಲಿಯರಸಾ । ತಲಕೆ ಮೆಟ್ಟುತ ॥ ಚಲಿ
ಸುವವಟುವಾಮನನಾಂ । ಜಲಜಲೋಚನೆ ॥ ೧೧ ॥

ಅಪರಿಮಿತದ ತಪದಿ ಕುಳಿತು । ಜಪವ ಮಾಡುವಾ ॥ ವಿ
ಪುಲಮತಿಯುವಟುವರಗೀ । ಚಪಲಭಾವವೇಂ ॥ ೧೨ ॥

ಗುರ್ವುಗಳಾಜ್ಞೆಯಿಂದತಾಯ । ಶಿರವ ಖಂಡಿಸಿ ॥ ಧರ
ಣಿಪಾಲಕುಲವಕಡಿದ । ಪರಶುರಾಮನಾಂ ॥ ೧೩ ॥

ವಿಹಿತವಾಯ್ತು ತಾಯಕೊಂದ । ಮಹಿತ ಪೀರನೆ ॥ ಅ
ಹಹನಿನ್ನ ನೋಡಿನಾಂ । ಸಹಿಸಬಲ್ಲೆನೆ ॥ ೧೪ ॥

ಜನಕನಾಜ್ಞೆಯಿಂದವೆರೆದು । ವನಿತೆಸೀತೆಯುಂ ॥ ವನ
ದೊಳುಸಂಚರಿಸಿದಾ । ಮನುಕುಲೇಂದ್ರನೆ ॥ ೧೫ ॥

ಕಾನನಾಂತವಾಸಿಯೊದ । ಮಾನನೀಯನೆ । ಏನು
ಬೇಕುಯಾಚಿಸನು । ಮಾನವೇತಕೆ ॥ ೧೬ ॥

ಮೇಳವಿಸಿಕೊಳುತ್ತಲ್ಲ । ಬಾಲರನ್ನು ॥ ಲೀಲೆಯಿಂ
ದಲಿರುವಗೋ । ಪಾಲಬಾಲನು ॥ ೧೭ ॥

ಗೊಲ್ಲರವಗೆನಿಶಿಯಕಾಲ । ದಲ್ಲಿ ಕೆಲಸವೇಂ ॥ ನಿಲ್ಲದೆ
ಪೋಗುದಯಕಾಲ । ಕಿಲ್ಲಿಬಾರೆೋ ॥ ೧೮ ॥

ಸಿದ್ಧಾಂತವಾದವೇದ । ಸದ್ಧರ್ಮದಾ ॥ ಪದ್ಧತಿಯನು
ದೂಷಿಸುವಾ । ಬುದ್ಧರೂಪಿಯು ॥ ೧೯ ॥

ಆಗಮುಗಳ ದೂಷಿಸುವಾ । ಯೋಗಿನೀನು ॥ ಹೋಗು
ನಮ್ಮ ಮನೆಯ ಮೆಟ್ಟ । ಲಾಗದೀಗ ॥ ೨೦ ॥

ವಾರುವನ್ನೇರ್ದ ಯವನ । ವಾರವನ್ನು ॥ ಮೀರಿ
ಕೊಂದಕಲ್ಕಿರೂಪಿ । ವೀರ ನಾನು ॥ ೨೧ ॥

ವೀರನಾಗೆ ಯುದ್ಧದೆಡೆಗೆ । ಸಾರು ಬೇಗದಿಂ । ನಾರಿ
ಮಣಿಯು ಸದನದ ಕೆಲ । ಸಾರಿದೆ ಏಕೆ ॥ ೨೨ ॥

ಸನ್ನುತಾಂಗಿ ಭಾಮೆ ಸಾಕು । ಇನ್ನು ವಾದವು ॥
ಮನ್ನಿಸೆನ್ನ ನಿನ್ನಯಮನ । ದನ್ನ ಕೃಷ್ಣನು ॥ ೨೩ ॥

ಎನಲು ಬಾಗಿಲನ್ನು ತೆಗೆದು । ಘನಿತೆ ಭಾಮೆಯು ॥
ವಿನಮಿಸಿ ಮನ್ನಿಸಿದಳು ಜಯ । ಮನುಜಸಿಂಹನೊ ॥ ೨೪ ॥

ಭೂಮಕ್ಕೆ ಬಡಿಸುವ ಕಾಲದಲ್ಲಿ ಹೇಳುವ ಹಾಡು.

ರಾಗ—ಶಹನ. ಮಿಶ್ರಛಾಪು.

ಭೊಮಕ್ಕೆಬಡಿಸಿದರು । ಕಾಮಿನಿಯರು । ಭೊಮ
ಕ್ಕೆಬಡಿಸಿದರು । ಪ ॥ ಸೋಮವದನೆಯರುಟ್ಟು ಮಡಿಗಳ ।

ಹೇಮ ಭೂಷಣಗಳನು ಧರಿಸುತ | ಕಾಮಿತಾರ್ಥಂಗಳನು
ಕೊಡುತಿಹ | ಭೂಮಿಜಾಧವ ರಾಮಚಂದ್ರನ ॥ ಅ ॥ ಹಸಿ
ಜಗುಲಿಯಮೇಲಿರ್ದ | ಕಸಗಳಕರ | ಬಿಸರುಹದಿಂಬಳಿದು|
ಪೊಸ ಮಂಡಲವ | ನಸವಸದಿಂ ಮಾಡುತ | ಹಸ ಗೊಳಿಸಿ
ರತುನದ ॥ ಮಿಸುಪ ದೀಪ ಸ್ತಂಭಗಳನಾ | ಲ್ದೆಸೆಯೊಳಿರಿಸು
ತ ಚಿನ್ನದೆಲೆಗಳ | ಪಸರಿಸುತ ಭೂಮವನು ಹಾಕುತ |
ಮಿಸುನಿರಂಗೋಲಿಯನು ಬಿಡುತಲಿ ॥ ೧ ॥ ಮೆರೆವಬಟ್ಟಲು
ಗಳನು | ಸರಿಮಾಡಿಇರಿಸುತ|ಲಿರದಭಿಘರಿಸುತ್ತ | ವರಲವಣ
ವನುಮೇ | ಲ್ಸರಿಸದೊಳ್ಬಡಿಸುತ್ತ | ತರತರದ ಚಟ್ಟಣಿ ॥
ಪರಿಪರಿಯ ಕೋಸುಂಬರಿಗಳನು | ತೆರವಿಡಿದು ಬಡಿಸುತ್ತ
ರುಚಿಯಾ | ಗಿರುವ ಪಲ್ಯಂಗಳನುಮೇಲೋ | ಗರಪಳದ್ಯ
ಗಳನ್ನು ತರುತಲಿ ॥ ೨ ॥ ಹುಳಿ ಗೊಜ್ಜು ರಸ ಸಂಡಗೆ |
ಹುಳಿ ಚಿತ್ರಾನ್ನ | ಗಳು ಗರುಗಾಂಬೊಡೆ | ಕಲಸೋಗರ
ಹ | ಪ್ಪಳ ಸಂಡಗೆಯು ಹೋಳಿಗೆ | ಹುಳಿತೊವ್ವೆಗಳು ತೇಂ॥
ಗೊಳಲು ಹೂರಿಗೆ ಕಡಬು ಸಣ್ಣ | ಡ್ಡಲಿಗೆಗಿಲುಗಂಚಿಗಳು
ಲಡ್ಡುಗೆ | ಚಿಲುಮುರಿಯು ವಡ್ಡಣಿಗೆ ಗರಿಚ | ಕ್ಕುಲಿ
ವಿಳಂಗಾಯ್ಗಳನುತರುತಲಿ ॥ ೩ ॥ ಕರಿದಸೇವ್ರಗೆಬಟ್ಟುವಿ |
ಪರಡಿಯು ಗೌಲಿ | ಸುರುಟಿಯಪ್ಪೆಯು ಮೊದಲಾ | ಗಿರು
ತಿರ್ಪ ಪಾಯಸ | ವರಗಳ ಬಡಿಸುತ್ತ | ತರತರದ ಬಿಳಿಸ ॥
ಕ್ಕರೆಯನುದುರಿಸಿ ಲಾಡು ಮಂಡಿಗೆ | ಗರುಗು ಫೇಣಿ ಚಿ
ರೋಟಿ ಚಿಲುಮುರಿ | ಮುರಿವಿಳಂ ಸುಪ್ಪಾಣಿ ಘೀವರು |
ಸುರುಳಿಹೋಳಿಗೆಗಳನು ತರುತಲಿ ಭೂಮಕ್ಕೆ ॥ ೪ ॥ ಇನಿ

ದಾದ ಹೊಸತುಪ್ಪ।ಕೆನೆಗಟ್ಟಿರುವಪಾ। ಲ್ಘನವಾದ ಮೊಸರು ಗಳ । ವನಿತೆಯರುಬಡಿಸುತ । ಲನುಪಮಪಾನಕವ । ತನಿ ವಣ್ಗಳನ್ನು ॥ ಘನ ಪರೀಮಳ ಭರಿತ ಜಲವನು । ಕನಕ ಕಲಶಗಳಲ್ಲಿ ತುಂಬುತ । ಅನುವಿನಿಂಬಲಗಡೆಯೊಳಿರಿಸುತ । ವನಿತೆಯರು ಜಯಮನುಜಸಿಂಹನ ॥ ೫ ॥

ಭೂಮಕ್ಕೆ ಬಡಿಸುವಾಗ ಹೇಳತಕ್ಕದ್ದು.

ರಾಗ—ಮಧ್ಯಮಾವತಿ. ಆದಿತಾಳ.

ಭೂಮಕ್ಕೆ ಬಡಿಸಿದರಾಗ । ಭಾಮಿನಿಯರುಬೇಗ । ಭೂಮಕ್ಕೆ ಬಡಿಸಿದರಾಗ ॥ ಪ ॥ ಹೇಮದಮಡಿಗಳ । ನೇಮದೊಳುಡುತಲಿ । ಸಾಮಜ ಪಾಲಕ । ತಾಮರಸಾಕ್ಷನ ॥ ಅ ॥ ರಾರಾಜಿಸುವ ದೀಪಸ್ತಂಭ । ವಾರವ ತಂದಿರಿಸುತ । ಚಾರುರಂಭಾಪರ್ಣಗಳನು । ಸೇರಿಸಿ ಹಾಕುತ್ತ ॥ ನಾರೀಮಣಿಯರು । ನೀರನುಚಿಮುಕಿಸಿ । ಶ್ರೀರಂಗವಲ್ಲಿಯ್ಯ ವಿಸ್ತಾರಿಹಾಕುತ ॥ ೧ ॥ ಹೀರರತ್ನದ ಬಟ್ಟಲುಗಳ । ವಾರವ ತಂದಿರಿಸುತ । ಚಾರುಪರೀಮಳವಾರಿ । ಪೂರಿತಕಲಶಂಗಳ ॥ ಶೌರಿಯಬಳಿಯೊಳು । ನಾರಿಯರಿರಿಸುತ । ಸಾರಸುಮದೊಳಿಭಿ । ಘೋರವ ಮಾಡುತ ॥ ೨ ॥ ಸರಿಸದೊಳಗೆ ಚಟ್ನೆ ಕೋಸುಂ । ಬರಿಯುಪ್ಪುವಡ್ಡಿ । ಮುರುಕಗಳನ್ನುಬಡಿಸುತ್ತ । ತರುತುಪ್ಪಿನಕಾಯನು ॥ ಪರಿಪರಿ ಶಾಕವ । ತೆರನರಿತಿರಿಸುತ । ಸುರುಚಿದ ಕಲಸೋ । ಗರಹುಳಿಗಳನು ॥ ೩ ॥ ಬೆಂಡೇಕಾಯ್ಗಳ ಗೊಜ್ಜು ಪಳಿದ್ಯ । ಸಂಡಗೆ ಹುಳಿ ಕಾ

ಪ್ಪುಸ । ಸಂಡಗೆ ಹಪ್ಪಳ ಚಿತ್ರಾನ್ನ । ಬೋಂಡುಗಳಾಂ
ಬೋಡೆ ॥ ದುಂಡುಲಾಡು ಯಿಣ್ಣೂರಿಗೆ ಹೂರಿಗೆ । ಮಂ
ಡಗೆ ಫೇಣಿ ಚಿರೋಟಿಗಳನ್ನು ॥ ೪ ॥ ನಾನಾಪಾಯಸ
ಘೃತಸೂಪ । ಧೇನುವಿನಿನಿಮೋಸ । ರಾನಂದಕರ ಶಾಲ್ಯನ್ನ ।
ಪಾನಕಮುಂಚಗಳನು ॥ ಮಾನಿನಿಮಣಿಯರು ಗಾನವಮಾ
ಡುತ । ದೀನಪಾಲಜಯ ಮಾನುಷಸಿಂಹನ ॥ ೫ ॥

ಭೂಮಕ್ಕೆ ಆರತಿ ಎತ್ತುವಾಗ ಹೇಳುವ ಹಾಡು.

ರಾಗ—ದರ್ಬಾರು. ರೂಪಕ ತಾಳ.

ಸಾರವಾಳಿಯನುಟ್ಟು । ಹೀರದ ಭೂಷಣ । ಹಾರಗಳನ್ನಿ
ಟ್ಟು । ತೋರಮುತ್ತಿನಹಾರ । ವಾರವ ಧರಿಸಿರ್ಪಾ । ನಾರೀ
ಮಣಿಯರೀರ್ವರೂ । ಶ್ರೀರಾಮನ ॥ ಭೂಮಕಾರತಿಯ
॥ ೧ ॥ ಶ್ರೀಪೂರ್ಣನೇತ್ರದಿಂ । ದೋಪಿಯ ನೋಡಿ ಸ ।
ಲ್ಲಾಪವ ಮಾಡುತಿರ್ಪ । ಪಾಪವಿದೂರ ಚಿ । ದ್ರೂಪವಿನ
ತಜನ । ತಾ ಪಾಪಹಾರಕನ । ಭೂಪಾಲನ ॥ ಭೂಮಕಾರ
ತಿಯ ॥ ೨ ॥ ಮಣಿಗಣಖಚಿತಕಂ । ಕಣಗಣಗಳು
ಬಲು । ಝಣಝಣರೆನ್ನುತಿರೆ । ಪ್ರಣತಾಮರರ । ಕ್ಷಣ
ದಕ್ಷಿಣಮತಿ । ಪ್ರಣಯಿಜಯನರಹರಿಯ । ಗುಣನಿಧಿಯ ॥
ಭೂಮಕಾರತಿಯ ಬೆಳಗಿರೆ ॥ ೩ ॥

ಆಪೋಶನ ಹಾಕುವಾಗ ಹೇಳುವ ಹಾಡು.

ರಾಗ—ಮುಖಾರಿ. ಮಿಶ್ರಚಾಪು.

ಆಪೋಶನಹಾಕೆ । ಈ ಪರಮಾತ್ಮನ । ಶ್ರೀಪೂರ್ಣಕರ
ಕಂಜಕೆ ॥ ಪಲ್ಲ ॥ ನಕ್ರವು ತನ್ನ ಪಾದವನು । ಬೇಗ

ನಾಕ್ರಮಿಸಲು ಗಜರಾಜ । ನಾಕ್ರಂದವೆಸಗುತಲಿವನ । ನುತ್ಯ । ಪಕ್ರಮವನು ಮಾಡೆ ಮುನ್ನ ॥ ಶುಕ್ರನಂದಿತ । ವ ಕ್ರಮತಿಖಲ । ಚಕ್ರನಾಶಕ । ಶಕ್ರಸನ್ನುತ । ವಿಕ್ರಮ ದೊಳಾ । ನಕ್ರವನು ಕೊಲೆ । ಸುಕ್ರಮದಿ ವರ । ಚ ಕ್ರಪಾಂತವ । ಗಾಪೋಶನ ॥ ೧ ॥ ವರಮುನಿತರಳನಾ ಗುದಿಸಿ । ಭೂಮಿಾ । ಭರವನು ನೆರೆ ಪರಿಹರಿಸಿ । ಕರ ದೊಳು ಧರಿಸುತ ದಂಡ । ಛತ್ರ । ನಿರುಪಮ ತರಕ ಮಂಡಲುವ ॥ ಸ್ಫುರಿಪತೇಜೋ।ತ್ಕರದಿ ಶತಭಾ । ಸ್ಕರರತಾಂ ಧಿ। ಕ್ಕರಿಪವೋಲ್‌ಬಲಿ । ಸರಿಸದೊಳುವಟು । ವರನತೆರದಿಂ। ಧರೆಯಬೇಡಿದ । ಹರಿಯಪಾಣಿಗೆ ॥ ಆಪೋ ॥ ೨ ॥ ಕ್ರೂ ರನ ಬಾಧೆ ಸೈರಿಸದೆ । ತನ್ನ । ಚಾರುಪಾದವ ನಂಬು ತಂದೆ । ಮೂರುಲೋಕದ ದೊರೆಯೆಂದು । ಕೂಗಿ । ಸಾರಲು ಪ್ರಹ್ಲಾದನೆಂದು ॥ ವೈರಿಯುರವ ವಿ । ದಾರಿಸುತ ಲಾ । ತೋರಕರುಳಿನ । ಹಾರವಾಂತಕ । ಡಾರಕೇಸರ । ಘೋರತರಮುಖ । ವಾರಿರುಹ ಜಯ । ನಾರಸಿಂಹಗೆ ॥ ೩ ॥

ರಾಗ—ಅಠಾಣ. ಮಿಶ್ರಚಾಪು.

ಆಪೋಶನವ ಹಾಕೆ । ತಾಪಾಪಹಾರಕ । ಗೋಪಾ ಲಬಾಲಕನ । ಶ್ರೀಪೂರ್ಣಪಾಣಿಗೆ ॥ ಪಲ್ಲ ॥ ಬಿಟ್ಟನ್ಯ ರನು ತನ್ನೊಳ್ । ನೆಟ್ಟನೆ ಚಿತ್ತವ । ನಿಟ್ಟವರ್ಗಭಯವ । ಕೊಟ್ಟರ್ಪ ಪಾಣಿಗೆ ॥ ೧ ॥ ವೃಂದಾವನದೊಳಾ । ನಂ ದದಿ ಚರಿಸುತ್ತ । ಬಂದು ಬೆಣ್ಣೆಯ ತಂದು । ತಿಂದಿರ್ಪ

ಪಾಣಿಗೆ ॥ ೧ ॥ ಗೆಳೆಯರೊಡನೆಗೋ । ಕುಲವನು ಪಾಲಿಸಿ । ಕೊಳಲನೂದುತಮಹಾ । ಚಲವನೆತ್ತಿದಪಾಣಿ । ಗಾಪ್ರೋಕ್ಷಣ ॥ ೩ ॥ ಮಡದಿ ಯಶೋದೆಯು । ನಿಡುಹಗ್ಗ ದೊಳು ಕಟ್ಟಿ । ನಡೆಯಲಾಗಂಟನು । ಬಿಡಿಸಿದ ಪಾಣಿಗೆ ॥ ೪ ॥ ದುರುಳ ಹಿರಣ್ಯಾಕ್ಷ । ನುರವ ಸೀಳುತ ಭಕ್ತ । ವರನ ಕಾಯ್ದ್ದ ಜಯ । ನರಹರಿಪಾಣಿಗೆ ॥ ೫ ॥

ಹೆಣ್ಣೊಪ್ಪಿಸಿಕೊಡುಗ ಹೇವಾಳುವ ಹಾಡು.

ರಾಗ—ಸೌರಾಷ್ಟ್ರ. ಮಿಚ್ರಚಾಪು.

ಹೆಣ್ಣೊನೊಪ್ಪಿಸಿತ್ತರಾಗ । ಕಣ್ಣನೀರತಂದು ಬೇಗ ॥ಪ॥ ಧರಣಿದೇವಿಯೆಂದು ತನ್ನ । ತರಳೆಯಾನನವ ನೋಡಿ । ಬರಸೆಳದು ಬಿಗಿಯಪ್ಪಿ । ಕರೆಯುತಾನಂದಬಾಷ್ಪವ ॥೧॥ ಕೂಸನೊಪ್ಪಿಸುವದೆಂತೊ । ವಾಸುದೇವನ ಬಂಧುಗಳಿಗೆ । ಕೂಸನೊಪ್ಪಿಸಿದ ಬಳಿಕ । ಈ ಸಂಸಾರದೊಳೆಂತಿರಲಿ ॥೨॥ ಕನ್ನೆಯನೆತ್ತಿಕೊಂಡಾಗ । ಲೆನ್ನಮ್ಮ ನೀನಿನ್ನುಬುದ್ಧಿ । ಯನ್ನು ಕಲಿಯುತತ್ತೆಮನೆಯೊಳ್ । ಉನ್ನತಾನಂದದಿ ಬಾಳು ॥ ೩ ॥ ಬಾಲೆ ನಮಿಸು ನಿಮ್ಮತ್ತೆಯ । ಕಾಲಿ ಗೆಂದು ಹೇಳಿ ತೊಡೆಯ । ಮೇಲೆ ಕೂಡಿಸುತ್ತಂಗೈಯೊಳ್ । ಹಾಲು ಹಣ್ಣುಗಳನು ಹಾಕಿ ॥ ೪ ॥ ಉಕ್ಕುವ ದುಃಖದಿ ಕೊಬರೀ । ಸಕ್ಕರೆಯ ಹಾಕಿ ಕರದೊಳ್ । ಚಿಕ್ಕಮಗು ವಸೀಬಾಲೆಯ । ನಕ್ಕರದಿಂ ಕಾಪಾಡಮ್ಮ ॥ ೫ ॥ ಕನ್ನೆ ಗೆಂಟುವರುಷವಾಗು । ವಿನ್ನೆವರಂ ಪಾಲಿಸುತ್ತ । ನಿನ್ನಪು

ತ್ರಗಿತ್ತಿವಿವಳ। ನುನ್ನತನ್ನೇಹದಿಂ ಪೊರೆಯೌ ॥ ೬ ॥ ಮನೆಯ ಕೆಲಸಂಗಳನೆಂದೂ। ತನುಜೆ ಮಾಡಿದವಳಲ್ಲಮ್ಮ। ವಿನಯಭೀತಿಗಳಿಂ ಬುದ್ಧಿ। ಯನು ಹೇಳುತ್ತ ಕಾಪಾಡಮ್ಮ ॥ ೭ ॥ ಬಾಲೆಯು ಮಾವನಂಕದ। ಮೇಲೆ ಕೂಡಿಸುತ್ತ ನಿಮ್ಮ। ಬಾಲಗಿವಳ ಕೊಟ್ಟೆ ದಯದಿ। ಪಾಲಿಸಬೇಕೀಮಗುವ ॥ ೮ ॥ ಎಂದೆಲ್ಲಾ ಬಂಧುಗಳಿಗಾ। ನಂದನೆಯನೊಪ್ಪಿಸುತ್ತ। ಬಂದು ಹರಿಯ ತೊಡೆಯ ಮೇಲೆ। ಚಂದದಿಂದ ಕೂಡಿಸುತ್ತ ॥ ೯ ॥ ಇನ್ನೆವರವಿವಳಬಲು। ಮನ್ನಣೆಯಿಂ ಪಾಲಿಸುತ್ತ। ನಿನ್ನ ಸೇವೆಗಿತ್ತೆವಿವಳ। ಸನ್ನುತ ಪಾಲಿಸು ದಯದಿಂ ॥ ೧೦ ॥ ಮಾನಿನೀಮಣಿಗಿವಳಿಗೆ। ನೀನೇ ಬಂಧು ಗುರುದೇವರು। ನೀನೇ ಸರ್ವವೆಂದು ಜಯ। ಮಾನುಷಸಿಂಹದೇವಗೆ ॥ ೧೧ ॥

ಕಂದನ್ನ ಆಡಿಸಿದ ಹಾಡು.

ರಾಗ—ಬಿರಹರಪ್ರಿಯ. ಆದಿತಾಳ.

ಲಾಲಿಲಾಲಿ। ಶ್ರೀಲೋಲ ಲಾಲಿ। ಪಾಲನ ಸುಶೀಲ ಗೋಪಾಲಲಾಲಿ ॥ ಪ ॥ ದಾನವನಕೊಂದುತಂದು। ನೀನು ವೇದವ। ಸೂನುವಾದ ಜೊಮ್ಮ ಗಿತ್ತ। ಮೀನ ರೂಪಿ ॥ ೧ ॥ ಪೇರ್ಮೆಯಿಂದದ್ರಿಯಾಂತು ಸು। ಧರ್ಮಾಧೀಶಗೆ। ಶರ್ಮವಮಾಡಿರುವಾದಿ।ಕೂರ್ಮರೂಪಿ ॥ ೨ ॥ ಕ್ರೂರನ ವಿದಾರಿಸುತ್ತ। ಕೋರೆದಾಡೆಯಿಂ। ಧಾರುಣಿಯ ನೆತ್ತಿದಭೂ।ದಾರಲಾಲಿ ॥ ೩ ॥ ಶೂಳನ ವಕ್ಷಸ್ಥಲವ।

ಸೀಳುತ ಕರುಳ | ಮಾಲೆಯನು ಧರಿಸಿರ್ಪ | ಜ್ವಾಲಾ ನರಸಿಂಹ ॥ ೪ ॥ ಭೂಮಿಯ ಬೇಡುತ್ತಲು | ದ್ದಾಮ ನಾದ | ಧಾಮನಿಧಿ ಕೋಟಿಧಾಮ | ವಾಮನ ಲಾಲಿ ॥ ೫ ॥ ಧರಣೀಶ ವಂಶಾಳತೂಲ | ಗಿರಿದಾವಾನಲ | ನಿರುಪಮಪರಾಕ್ರಮ | ಪರಶುರಾಮ ॥ ೬ ॥ ಕಾಮಿನಿಯೊಡನೆಪ್ರುಗು | ತಾಮಹಾವನವ | ತಾಮಸೀಚರನ ಕೊಂದ | ರಾಮ ಲಾಲಿ ॥ ೭ ॥ ಖೂಳನಾದ ಕಂಸನನ್ನು | ಹಾಳುಮಾಡಲು | ಮೇಲಾಗವತರಿಸಿರ್ಪ | ಬಾಲಕೃಷ್ಣ ॥ ೮ ॥ ಸದ್ಧರ್ಮವ ದೂಷಿಸು | ವುದ್ಧವದೊಳೇ | ಒದ್ದಾದರನಾಗಿ ಮೆರೆದ | ಬುದ್ಧ ಲಾಲಿ ॥ ೯ ॥ ಘೋರಯವನರನ್ನು ಮಥಿಸೆ | ವಾರುವನೇರ್ದ | ಧೀರ ಕಲ್ಕಿರೂಪ ಜಯ | ನಾರಸಿಂಹ ॥ ೧೦ ॥

## ಬೀಗರ ಹಾಡುಗಳು.

### ಗಣೇಶ ಪ್ರಾರ್ಥನೆ.

ರಾಗ—ಪೀಲು. ಆದಿತಾಳ.

ಗಜವದನ | ಗಣನಾಥ ಹೇರಂಬ ॥ ಪಲ್ಲವಿ ॥ ಕಾಳರಕ್ಕಸಿಯಂತೆ | ಹೋಳಿಗೆಗಳ ತಿಂಬ | ಖೂಳ ಬೀಗಿತ್ತಿಯ | ಲೀಲೆಯಪೇಳುವೆ ॥ ೧ ॥ ಕಾಗಿಯ ಬಳಗದಂ | ತೀಗಲಿಲ್ಲೀಗೆ ಬಂದ | ಬೀಗರ ಗುಣವನೋ | ಲಾಗಿ ವರ್ಣಿಪೆ ॥ ೨ ॥ ವರಜಯ ನರಹರಿ | ಶರಣರವನೆಯೂಟ | ಕ್ಕಿರದೆ ಬಂದಿಹ ಬೀಗ | ರಿರವನು ವರ್ಣಿಪೆ ॥ ೩ ॥

## ಹೆಣ್ಣಿನವರು ಹೇಳತಕ್ಕದ್ದು.

ರಾಗ—ಬೆಹಾಗು. ಅಟ್ಟತಾಳ.

ವರಗಳನೀಡು । ವರಗಣನಾಥ ॥ ಪಲ್ಲ ॥ ಮತ್ತೆ ಬೀಗಿತ್ತಿಯು । ಮತ್ತೆ ಹೇಳುವದ । ಕುತ್ತರವನು ಕೊಡ । ಉತ್ತಮ ಮತಿಯು ॥ ೧ ॥ ಖೂಳೆ ಬೀಗಿತ್ತಿಯು । ಕೋಲಾಹಲದಿಂ । ಹೇಳುವದಕೆ ಪಡಿ । ಹೇಳುವ ಪರಿಯಿಂ ॥ ೨ ॥ ಬಗೆಬಗೆ ಪದಗಳ । ಮಿಗೆ ಹೇಳಲು ಈ । ಜಗಳ ಗಂಟೆಯಿಂ । ಬಗೆ ಬೆದರದವೋಲ್ ॥ ೩ ॥

## ಗಂಡಿನವರು ಹೇಳತಕ್ಕದು.

ರಾಗ—ಕೇತಾರಗೌಳ. ಮಿಶ್ರಚಾಪು.

ಅರಿಯದೆ ಬಂದೆವಲ್ಲ । ಪರಕಿಸಲಿಲ್ಲ ॥ ಪಲ್ಲ ॥ ಹರಿಸದಿಂದಿವರೆಲ್ಲ । ಪರಿಚರಿಸುವದಿಲ್ಲ ॥ ಅನುಪಲ್ಲವಿ ॥ ಬೀಗರು ಬಂದರೆಂ । ಬೀಗಲೆ ಬಿಸಿನೀರ । ಬಾಗಿಲೊಳಟ್ಟೆಮ । ಗಾಗಲೆ ಕೊಡಲಿಲ್ಲ ॥ ೧ ॥ ಚಿನ್ನದ ಗಿಂಡಿಯೊಳ್ । ಪನ್ನೀರ ತುಂಬಿಸಂ । ಪನ್ನರಾದೆಮಗಿತ್ತು । ಮನ್ನಿಸಲಿಲ್ಲವು ॥ ೨ ॥ ವರಜಲಪಾತ್ರೆಯು । ಕರದಿಪಿಡಿದುಜಯ । ನರಹರಿ ಭಕ್ತರ । ಚರಣಕ್ಕೆ ಕೊಡಲಿಲ್ಲ ॥ ೩ ॥

## ಹೆಣ್ಣಿನವರು ಹೇಳತಕ್ಕದ್ದು.

ರಾಗ—ಕೇತಾರಗೌಳ. ಮಿಶ್ರಚಾಪು.

ಬರಿದೆ ದೂರುವರೆ ಹೀಗೆ । ಸರಿಯೆ ನಿನಗೆ ॥ಪಲ್ಲವಿ॥ ಸರಸದಿಂದಲುಪ । ಚರಿಸುತ್ತಲಿದ್ದರು ॥ ಅನು ॥ ಹೊಳೆವ

ಪಾತ್ರೆಯೊಳಿದ್ದ । ತಿಳಿನೀರಿಂದ ನಿನ್ನ । ಕೊಳಕು ಕಾಲುಗಳನ್ನು । ತೊಳಕೊಂಡ ಬಳಿಕಿಂತು ॥ ೧ ॥ ಬೀಗಿತ್ತ ಬಹಳೆಂದು । ಬಾಗಿಲೊಳ್ಬಿಸಿನೀರ । ನೀಗಿತ್ತುದನು ಮರತು । ಕಾಗಿಯಂದದೊಳಿಂತು ॥ ೨ ॥ ಹುಚ್ಚಿ ನಿನಗೆ ವೈಯೊಳೆಚ್ಚರವಿಲ್ಲವೊ । ಮುಚ್ಚು ಮುಚ್ಚು ಬಾಯ । ಹೆಚ್ಚು ಮಾತುಗಳೇಕೆ ॥ ೩ ॥

## ಗಂಡಿನವರು ಹೇಳತಕ್ಕದ್ದು.

ರಾಗ—ಖರಹರಪ್ರಿಯ. ಮಿಶ್ರಛಾಪು

ಛಾಪಿಸಿ ಬೇಡಿದಳು । ದ್ವೇರನಿವಳು ॥ ಪಲ್ಲವಿ ॥ ಹರಿಯ ಮುಂದಕ್ಷತೆ । ಯಿರಿಸುತ ಊಟಕೆಯಾರು । ಬರಬಾರದೆನ್ನುತ । ಕರಗಳ ಮುಗಿಯುತ ॥ ೧ ॥ ಎಂಟು ಜನದ ಮೇಲೆ । ನೆಂಟರಿಷ್ಟರು ಬಂದು । ತುಂಟೂಟಗಳ ಮಾಡೆ । ತಂಟೆಯ ಮಾಡೆಂದು ॥ ೨ ॥ ಮತ್ತೊಬ್ಬರೀ ಮನೆ । ಯುತ್ತಮದೂಟಕೆ । ಇತ್ತ ತಿರುಗಿನೋಡ । ದತ್ತ ಹೋಗಲೆಂದು ॥ ೩ ॥

## ಹೆಣ್ಣಿನವರು ಹೇಳತಕ್ಕದ್ದು.

ರಾಗ—ಖರಹರಪ್ರಿಯ. ಮಿಶ್ರಛಾಪು.

ನಾವು ಬೇಡಿದೆವೀಗ । ದೇವರ ಬೇಗ ॥ ಪಲ್ಲ ॥ ಸಾವಿರ ಮಂದಿಯು । ಸಾಲಾಗಿ ಬರಲೆಂದು ॥ ಅನು ॥ ಅಕ್ಷತೆ

ಯನು ಸೊರ । ಸಾಕ್ಷ್ನನ ಮುಂದಿಟ್ಟು । ಲಕ್ಷ್ಮೆ ಜನರು ನಂಟ । ರೀಕ್ಷಣ ಬರಲೆಂದು ॥ ೧ ॥ ಹರಿಗರ್ಪಿತವಾದೀ । ಪರ ಮಾನ್ನ ಮುಖ ಶಾಕ । ವರಗಳನೆಲ್ಲಬೀ । ಗರು ತಿಂದು ತೇಗ ಲೆಂದು ॥ ೨ ॥ ಈರೀತಿಯಲಿ ನೀನು । ನಾರಿಯೆ ತಿಳಿ ಯದೆ । ದೂರಲು ಹೀಗೆ ಜಯ । ನಾರಸಿಂಹನೊಚ್ಚ್ಸನು ॥ ೩ ॥

ಗಂಡಿನವರು ಹೇಳುವದ್ದು.

ರಾಗ—ಖರಹರಪ್ರಯ. ಆದಿತಾಳ.

ಮಾನಿನಿ ಬೇಡಿದಳು । ಶ್ರೀನಿವಾಸನ ಹೀಗೆ ॥ ಪಲ್ಲ ॥ ನಾನಾ ಭಕ್ಷ್ಯಗಳ । ತಾನೆ ತಿನ್ನಬೇಕೆಂದು ॥ ಅನು ॥ ಹರಿಯ ಮುಂದಕ್ಷತೆ । ಯಿರಿಸುತಊಟಕದಾರು । ಬರದಿರುವಂತೆ ನೀನು । ವರಗಳ ನೀಡೆಂದು ॥ ೧ ॥ ಎಂಟು ಮಂದಿಯಮೇಲೆ । ನೆಂಟರಿಷ್ಟರು ಬಂದು । ತುಂಟಾಟಗಳ ಮಾಡೆ । ತಂಟೆ ಯುಂಟಾಗಲೆಂದು ॥ ೨ ॥ ಮತ್ತೊಬ್ಬರೀಮನೆ । ಯುತ್ತಮ ದೂಟಕೆ । ಇತ್ತ ತಿರುಗಿನೋಡ । ದತ್ತಲೆ ಹೋಗುವಂತೆ ॥ ೩ ॥

ಗಂಡಿನವರು ಹೇಳುವದು.

ರಾಗ—ಶಂಕರಾಭರಣ. ಆದಿತಾಳ.

ಏನ ಬಣ್ಣಿಪೆವ್ರನಾ । ವಾನಂದಿಸುತಲ ॥ ಪಲ್ಲವಿ ॥ ದೀನೆಬೀಗಿತ್ತಿ ಮಾಡಿ । ದೀನಡತೆಗಳನು ॥ ಅನು ॥ ಮುತ್ತು ಗಳನು ಬಿಗಿಸಿ । ದುತ್ತಮ ಪೀಠವ । ಕತ್ತೆ ಬೀಗಿತ್ತಿ ತಂ ।

ದಿತ್ತ ಹಾಕಲಿಲ್ಲವು ||೧|| ಚಿನ್ನದ ಮಣೆಗಳ | ಮುನ್ನವೆ ಹಾಕಿಸಿ | ಸನ್ನುತರಾದೆಮ್ಮ | ಮನ್ನಿಸ ಲಿಲ್ಲವು ||೨|| ಮಣಿ ಗಳಕೆತ್ತಿದ | ಮಣೆಗಳಹಾಕುತ | ಪ್ರಣಯದಿಂದೆಮ್ಮನೀ | ಕ್ಷಣದಿಮನ್ನಿಸಲಿಲ್ಲ || ೩ ||

ಹೆಣ್ಣಿನವರು.

ರಾಗ—ಶಂಕರಾಭರಣ. ಆದಿತಾಳ.

ಸಾಕುಸಾಕೀನಿನ್ನ | ಕಾಕುತನಗಳೆಲ್ಲ || ಪಲ್ಲ || ಹಾಕಿರುವೀಪೀಠಾ | ನೇಕವನೀಕ್ಷಿಸು || ಅ || ಗೇಣುಗೇ ಣಿಗೆ ಹಾಕಿ | ದಾಣಿಮುತ್ತಿನ ಮಣೆಯು | ಕಾಣುವದಿಲ್ಲ ವೋ | ಜಾಣೆಯೆ ನಿನಗೆ || ೧ || ಕನ್ನೆ ನೀ ಬಹೆಯೆಂದು ಚಿನ್ನದ ಮಣೆಗಳ | ಮುನ್ನಮೆಹಾಕಿಹು | ದನ್ನು ಕಣ್ಣೆ ತ್ತಿ ನೋಡು || ೨ || ನಾರಸಿಂಹನಭಕ್ತ | ವಾರವೆಸಗಿ ದುಪ | ಚಾರಕೆ ಮೆಚ್ಚದೆ | ದೂರುವರೇನೆಲೆ || ೩ ||

ಗಂಡಿನವರು.

ರಾಗ— ಕಮಾಚ್. ಆದಿತಾಳ.

ಏನ ನೀ ಮಾಡಿದೆ | ದೀನೆಯೇ ಮಾನವ ||ಪಲ್ಲವಿ|| ಬಾಳೆಲೆಗಳ ತಂದು | ಸಾಲುಸಾಲಾಗಿ ಹಾಕಿ | ಮೇಲಾದ ದೀಪದ | ಜಾಲವನಿರಿಸದೆ ||೧|| ಪಿಂಗದೆ ಯಲೆಗಳ | ಮುಂಗಡೆಯೊಳುಘೊಸ | ರಂಗೋಲಿಹಾಕದೆ | ಮಂಗನಂ

ತಾಡುವೆ ॥ ೨ ॥ ಹರಕೆಲೆಗಳ ಮುಂದೆ। ಸೊರಟುದೊ ನ್ನೆಯ ಹಾಕಿ। ಬರಿದೆ ವ್ರೀಡಾಡುತ । ಹರಟೆಯ ಹರ ಟುತಿ ॥ ೩ ॥

ಹೆಣ್ಣಿನವರು.

ರಾಗ—ಕಮಾಚ್. ಆದಿತಾಳ.

ಜೇಗದಿಂತಲೆಯ । ಬಾಗಿಸಿ ನೋಡೆಲೆ ॥ ಪಲ್ಲವಿ ॥ ಕಾಗಿಯುಂಪದೊಳಿಂತು। ಕೂಗಲು ಫಲವೇನು। ಬೀಗರ ದೂರುವ। ರೋಗದ ಹಂದಿಯೆ ॥ ೧ ॥ ಹಸರು ಬಾಳೆ ಲೆಯ ಮುಂ। ದೆಸೆಯೊಳು ಮುತ್ತಿನ। ಪೊಸತಾಗೀ ಬರೆದೀ। ಹಸೆಗಳ ನಹಹ ॥ ೨ ॥ ಕೌತುಕದಿಂದೀಪ। ವ್ರಾತವ ನಿರಿಸಿಹ। ರೀತಿಯ ನೋಡೆಲೆ। ಪಾತಕೀನೀಂ ಪಲೆ ॥ ೩ ॥ ಬೂಳೆ ಸಿಮ್ಮಪ್ಪನ। ಕಾಲದಿಂದೀಪರಿ। ನೋಲಾದ ಮಾನವ। ಕಾಳನೀಂ ಕಾಣೆಯೇ ॥ ೪ ॥

ಗಂಡಿನವರು.

ರಾಗ—ಹರಿಕಾಂಬೋಜಿ. ಆದಿತಾಳ.

ನಾರಿಯು ಪಾತ್ರಾಭಿ। ಘೋರಕೆ ಹೊರಟಳೀ ॥ಪಲ್ಲ। ಪಾರಿಜಾತದ ಹುವ್ವ। ಹಾರಾಡಿಸುತಲಿ। ತೋರುತಕಂಕಣ। ದಾರವನ್ನು ॥ ಅನು ॥ ಬಾಲೆಯು ತುಪ್ಪವ। ಕೇಳಲು ಪತಿಯನು। ತಾಳೆನ್ನುತ ಕೋಪ। ತಾಳುತಲಾಗಕ। ಪ್ರೋ

ಲಕೆ ಹೊಡೆಯಲು | ಬೀಳುತೇಳುತ್ತ ||೧|| ಒಡಕು ಕಾಟನು ತನ್ನ| ಯಡಗೈಯಲ್ಲಿ| ಪಿಡಿಯುತ ನಡನಡುಗುತ ಮುಂದಡಿಯ | ನಿಡುತೆಡವುತ ಗಡ | ಬಿಡಿಯ ಮಾಡು ತ್ತ ||೨|| ಅರೆಪಾವು ತುಪ್ಪದೊಳ್ | ಮರುದಿನಕರ್ಧವ| ಸಿರಿಸಿಕೊಳ್ಳುತಲುಳಿ | ದಿರುವ ತುಪ್ಪದೊಳೇ | ತರುತಲಿ ಸ್ವಲ್ಪವ| ಸರಿಸರಿ ಯನ್ನುತ || ೩ ||

ಹೆಣ್ಣಿನವರು.

ರಾಗ—ಹಿಂದುಸ್ತಾನಿ ಕಾಪಿ. ರೂಪಕತಾಳ.

ಏನನಾಡಿದೆ ಛೀ ಛೀ | ದೀನೆಬೀಗಿತ್ತಿ || ನೀ || ಪಲ್ಲ| ಶ್ವಾನಬುದ್ಧಿಯಿಂದಶೀಗ | ಮಾನಗೆಟ್ಟ ಹೀನೆಯಂತೆ |ಅನು| ಉಪ್ಪುತುಪ್ಪವನಿಂ | ಮಪ್ಪನ ಕಾಲದಿಂ| ಬೆಪ್ಪಿಯೆನೀಂ ಕಾಣೆಯೇನೊ| ಚಪ್ಪರಿಸುತ ನಾಲಿಗೆಯನು || ೧ || ನಿನ್ನ ಬಳಗವು ತುಪ್ಪ| ವನ್ನೆ ಕುಡಿಯುತ | ಮುನ್ನದಣಿಯ ವಂತೆ ನೂರು | ಹೊನ್ನಿಗೆ ತರಿಸಿಹುದ ನೋಡು || ೨ || ದೀನೆ ನಿನ್ನಯ ಜನಕೆ | ಸ್ನಾನಕಾದರೂ| ನಾನು ಕೊ ಡುವೆ ತುಪ್ಪವ ಜಯ | ಮಾನುಷ ಕೇಸರಿಯ ದಯದಿ ||೩||

ಗಂಡಿನವರು.

ರಾಗ—ಜಲಾಬು. ಆದಿತಾಳ.

ಬಾರೆಲೆ ಬೀಗಿತ್ತಿ | ಸಾರುವೆ ಸೀನೆತ್ತೀ | ಘೋರಾ ರವವೆತ್ತಿ | ಚೀರಿಡುಕತ್ತಿ || ಪಲ್ಲವಿ || ಹಾಡನು ಹೇಳುವ |

ರೂಢಿಯೆ ನಿನಗಿಲ್ಲ। ಲಾಡತಿನ್ನೆ ಬಾಯು । ಲ್ಲಾಡಿಸುವಂತಲ್ಲ ೧। ಕೂಗುತ ಕತ್ತೆಯಂತೆ। ಕಾಗಿಯಂದದಿ ನಿಂತೀ। ಮೂಗನು ಕುಣಿಸುವ । ರೋಗದ ಹಂದಿ ॥ ೨ ॥ ಸರಿಗೆ ಸರಿಯು ಹೇಳೆ। ಬರದಿದ್ದರೆ ಜಯು। ನರಹರಿ ಭಕ್ತರ ॥ ಚರಣಕೆ ಬೀಳೆ ॥ ೩ ॥

ಹೆಣ್ಣಿನವರು.

ರಾಗ—ಆನಂದಭೈರವಿ. ಆದಿತಾಳ.

ಬಾರೆ ಬಾರೆ ಬಾರತ್ತಿಗೆ। ಹಾಡನು ಹೇಳೆ ॥ ಪ ॥ ಝುಣಝುಣರೆನಿಸುತ್ತ। ಮಣಿಕಿಂಕಿಣಿಗಳ । ಗಣಿಕಾಕುಲಶಿರೋ। ಮಣಿ ಕುಣಿಯುತ ಬಾರೆ ॥ ೧ ॥ ತಿಮ್ಮಣ್ಣನ ಸತಿ। ಹೆಮ್ಮೆ ಯಾಕೆ ಕೋತಿ। ಸುಮ್ಮನೆ ಕೂಡದೆ। ಸುಮ್ಮಾನದಿ ಬಾರೆ ॥ ೨ ॥ ಬರಿಮಾತುಗಳನೀ। ನೊರೆಯದೆ ಜಯನರ। ಹರಿಯನೆ ನೆನದು ಹಲ್ಲ। ಕಿರಿಯದೆ ಕಿರಿಬಾರೆ ॥ ೩ ॥

ಗಂಡಿನವರು.

ರಾಗ—ನೀಲಾಂಬರಿ. ಆದಿತಾಳ.

ಪ್ರಸ್ತರಚನೆಯು ನ ದೆಂತು। ವಿಸ್ತರಿಪೇನು ॥ ಪ ॥ ಅಸ್ತವಾದುದು। ಶಿಸ್ತಿನೊಳಗೆ। ಶಸ್ತಭಕ್ಷ್ಯವಕೇಳೆ । ನಾಸ್ತಿಯೆಂದು। ಹಸ್ತತೋರುವಳು ॥ ಅನುಪಲ್ಲವಿ ॥ ಹಳಸಿದನ್ನವು। ಕೊಳಕುಮಜ್ಜಿಗೆ। ಕಿಲುಬು ಗೊಜ್ಜಿದು।

ಗಳದೊಳಿಳಿಯುಧು ಹಾ ! ತೊಳಸುವದು ಹೊಟ್ಟೆ ॥ ೧॥ ಹೊತ್ತಿದನ್ನದ ಸುತ್ತಮುತ್ತಲು । ಮುತ್ತಿಹುದು ನೊಣ । ಮೊತ್ತವಿತ್ತಿತ್ತ ॥ ಕೈ । ಯೆತ್ತಿಕೊಳ್ಳುತೀ ।೨। ಸೋರುದೊನ್ನೆಯೊ । ಳ್ಸಾರು ನೀರ ನೀ । ನಾರಿಹಾಕಲು । ದಾರಿಹಿಡಿತತ್ತ ॥ ಜಯ । ನಾರಸಿಂಹ ॥ ೩ ॥

## ಹೊನ್ನವರು.

ರಾಗ—ನೀಲಾಂಬರಿ. ತ್ರಿಪುಟತಾಳ.

ದೂರುವರೇನೆಲೆ ನಾರೀ । ಘೋರಬಜಾರಿ ॥ ಪ ॥ ಸಾರಭಕ್ಷ್ಯದ । ವಾರಗಳನೀಂ । ವಿಾರತಿನ್ನುತ ದೂರುವರೆ ಖುಲ್ಲೆ ॥ ಏಳ । ಲಾರಿಯಲ್ಲೆ ॥ಅ॥ ಬಾಗಿದಾಸ್ಯವ । ನೀಗಲೆತ್ತದೆ । ಸಾಗಿಸುತಸೊಗ । ಸಾಗಿ ಭಕ್ಷ್ಯವನು ॥ ಹೀಗೆಂದು ನೀನು ॥ ೧ ॥ ಬೆನ್ನು ಹತ್ತಿದ । ನಿನ್ನ ಹೊಟ್ಟೆಯು । ಮುಷ್ಣಭೇರಿಗಳನ್ನು । ಹೋಲುವದು ॥ ಇನ್ನ ನೀನೋಡು ॥೨॥ ನೆನೆಯದೇ ಜಯ । ಮನುಜಹರಿಯನು । ದನುಜೆ ನೀನೀ। ಮನೆಯ್ಯೊಳುಂಡುಟ್ಟು ॥ ಮನಬಂದ ತೆರದಿ ॥ ೩ ॥

ರಾಗ—ಬೇಹಾಗ್. ಆದಿತಾಳ.

ಛೀಛೀಛೀ ಮುದಿಕತ್ತಿ ಬೀಗಿತ್ತಿ ॥ ಪ ॥ ಲಾಡು ಕೇಳಲುಸಿಟ್ಟು । ಮಾಡುವೆಯೇತಕಾಂ । ಬೋಡಿಯಕೇಳೆ ಕೈ । ಜೋಡಿಸಿ ನಿಲ್ಲುವಿ ।೧॥ ಹಪ್ಪಳವನು ಕೇಳೆ । ಚಪ್ಪಳೆ

ಹಾಕುವಿ । ತುಪ್ಪವ ಕೇಳಲು । ಕುಪ್ಪಳಿಸುವರೆ ॥ ೨ ॥ ಸಕ್ಕರಿ ಕೇಳಲು ॥ ಕಕ್ಕ ಬಿಕ್ಕಾಗುವಿ । ಚಕ್ಕುಲಿ ಕೇಳಿ ದಿಕ್ಕು । ದಿಕ್ಕನು ನೋಡುವಿ ॥೩॥ ಹೀನೆ ಮಾಳ್ಪರೆ ಯಿಂಥಾ । ಮಾನಹಾನಿ ಪ್ರಸ್ತವ । ದೀನೆ ಮೆಚ್ಚನು ಜಯ । ಮಾನುಷಸಿಂಹನು ॥ ೪ ॥

ರಾಗ—ಬೆಹಾಗು. ಆದಿತಾಳ.

ಛೀಛೀಛೀ ನಡೆ ಬೇಗ । ಕೂಗದೆ ॥ ಪ ॥ ಮಾಡಿದ ಪ್ರಸ್ತದ । ಲಾಡುಗಳೆಲ್ಲವ । ಬೋಡಿಯೆ ತಿಂದು ಹೀ । ಗಾಡುವರೇನೆಲೆ ॥ ೧ ॥ ಗಂಡನೊಡನೆ ಬಂದು । ಮಂಡಿಗಿರಾಶಿಯ । ಭಂಡೆಯೆ ತಿಂದು ತೇಗಿ । ಪುಂಡಾಟಮಾಡುವೆ ॥೨॥ ಹೋಳಗಿ ಬಿಟ್ಟವ । ಹಾಲುತುಪ್ಪದಿ ಕಲಸಿ । ಕೀಳುಮೇಲರಿಯದೆ । ಕಾಳಿಯೆ ತಿಂದಿ ॥ ೩ ॥ ನಾರಿಯ ರೂಪದಿ ಬಂದ । ಘೋರರಾಕ್ಷಸಿಯೊ ನಿ । ಸ್ತ್ರೀರೀತಿಯ ಜಯ । ನಾರಸಿಂಹನೆ ಬಲ್ಲ ॥ ೪ ॥

ಗಂಡಿನವರು ಹೇಳುವದು.

ರಾಗ—ಮಾಂಜಿ. ಮಿಶ್ರಛಾಪು.

ದೂರುವರೇನೆ । ಬಜಾರಿ ನೀನೆ ॥ ಪಲ್ಲ ॥ ಕ್ರೂರೆ ನೀನು ಮಿತಿ । ವಿಚಾರಿ ಮರ್ಯಾದೆಯ ॥ಅ॥ ಮಾನದಿಂಬಂದು । ಭೋಜನಕೆಂದು । ನೀನೇ ಕರದು । ಜ್ಞಾನವಿಲ್ಲದೆ ಹೀಗೆ । ಶ್ವಾನನಂದದೊಳೀಗ ॥ ೧ ॥ ಹರಕೆಲೆ ಹಾಕಿ । ತರಗಿನ

ದೊನ್ನೆ । ಸರಕನು ತೋರಿ । ಎರೆದುದ ಬಡಿಸದೆ । ಬರಿದೆ ಪೋಡಾಡುತ ॥ ೨ ॥ ಸಾರನ್ನ ಕೇಳೆಬಡಿಸುವೆ ಯಾಕೆ । ನೀರನ್ನ ಖೂಳೆ । ಧೀರ ಜಯ ನರಹರಿ । ಯಾರಾಧಕರನ್ನ ॥ ೩ ॥

## ಹೆಣ್ಣಿನವು.

ರಾಗ—ಸೌರಾಷ್ಟ್ರ. ಆದಿತಾಳ.

ಊಟಕ್ಕೆಬಂದಬೀಗರ । ಕೂಟವನೋಡಿ ॥ ಪಲ್ಲ ॥ ತಾಟಕಿಯು ಬೀಗಿತ್ತಿ । ಬೂಟಾಟಧಬೀಗನಿವನು ॥ ಅ ॥ ಕೋರೆ ಹಲ್ಲು । ಜೋರುಬಾಯಿ । ಘೋರರೂಪದಿಂ । ದೂರದೂರ ಕೆಕಾಲನಿಡುತ । ಹಾರುತ್ತ ಪರಿವಾರದೊಡನೆ ॥ ೧ ॥ ಕಜ್ಜಿ ಮೈಯ । ನುಜ್ಜೆ ತುರಿಸು । ಪುಜ್ಜುಗದೊಳೀ । ಸಜ್ಜಳಾದ ಗುಜ್ಜುವಾ । ಳಜ್ಜಿಯಕೂಡಿ ॥ ೨ ॥ ಅಪ್ಪನಕಾಲದಿಂತಿಳಿ ತುಪ್ಪಕಾಣದೆ । ಯೆಪ್ಪತ್ತುಹೋಳಿಗೆತಿನಲು । ಕುಪ್ಪಿಕುಪ್ಪುತ ॥ ೩ ॥ ಚಕ್ಕುಲಿರಾಶಿಯ ತಿನ್ನೆ । ಚಿಕ್ಕ ಮಕ್ಕಳನ್ನ ಬಿಟ್ಟು । ಸಕ್ಕರೆಯ ಮುಕ್ಕುತ । ಮ್ಮಕ್ಕನೊಡನೆ ॥ ೪ ॥ ಹಂದಿಯಂತೆ ಚಿಳ್ಳಪಿಳ್ಳೆ । ಯೊಂದಿಗೆಬಂದು । ನಿಂದಿರುವರಂಡ ಪೆನಾ । ನಂದೀಬಲ್ಲೆನು ॥ ೫ ॥

## ಗಂಡಿನವರು.

ರಾಗ—ಮುಖಾರಿ. ಆದಿತಾಳ.

ಖುಲ್ಲೆಬೀಗಿತ್ತಿ ಯಿವ । ಳೆಲ್ಲಿದೊರಿತಳೊ ॥ ಪಲ್ಲ ॥ ಮೆಳ್ಳೆ ಗಣ್ಣು । ಡೊಳ್ಳು ಹೊಟ್ಟೆ । ಜೊಲ್ಲುಸುರಿಕಿಯು ॥ ಅ ॥

ಗೂನುಬೆನ್ನಿಹೇನುತಲೆ | ಬಾನಿಹೊಟ್ಟೆಯು ‖ ಶ್ವಾನನಂತೆ | ಸೀನುವಳು | ದೇನುರೂಪವೊ ‖ ೧ ‖ ಕುಂದಿಯಂದ ದಿಂದಬಂದು | ನಿಂದುನೋಡುತ ‖ ವಂದನುಬಡಿಸದೆ ತಾ | ನಿಂದುದೂರುವ ‖ ೨ ‖ ಪರಿಪರಿಯುಪಾಯುಷವ | ತರು ತಿಲ್ಲಿಬಂದು | ಕಿರಿದುಹಲ್ಲ | ದುರುಳಿಬಲು | ಹರಟೆ ಹರ ಟುವಳು ‖ ೩ ‖

ಹೆಣ್ಣಿನವರು.

ರಾಗ—ಪೂರ್ವಿ. ಆದಿತಾಳ.

ಇವನ್ಯಾರೆ | ಇವನ್ಯಾರೆ ‖ಪ‖ ಸವಿಯೂಟಕ್ಕೆ | ತ್ಸವದಿಂಬಂದಿಹ ‖ ಅ ‖ ಕಬ್ಬಿಣದಂತಿಹ | ನುಬ್ಬು ಹಲ್ಲಬಲು | ಹುಬ್ಬನುಕುಣಿಸುತ | ತಬ್ಬಿಬ್ಬಾಡುವ ‖ ೧ ‖ ದೊಣ್ಣೆಮೂಗಿನವ | ಸಣ್ಣಕಣ್ಣಿನವ | ಹುಣ್ಣಿ ನಮೈಯವ | ನೆಣ್ಣೆಮುಖಕಿನವ ‖ ೨ ‖ ಸುರಿಸುತ ಜೊಲ್ಲನು | ಕಿರಿಯುತಹಲ್ಲನು | ಒರುವನುಜಯನರ ಪರಿ ಹರಿ ಯನುತಲಿ ‖ ೩ ‖

ಗಂಡಿನವರು

ರಾಗ—ಪೂರ್ವಿ. ಆದಿತಾಳ.

ಸರಿಯೇನೆ ಸರಿಯೇನೆ ‖ ಪಲ್ಲ ‖ ನಿರುಪಮರನು ನಿಂ | ಜರಿಯುವಪರಿಯಿದು ‖ ಅ ‖ ಜಲಜಾಕ್ಷಿಗನೋಲ್ |

ಸುಲಲಿತರೂಪರ | ಕುಲಗೇಡಿಯೆನೀಂ | ಬಲುಜರಿಯುವ ದಿದು ‖ ೧ ‖ ಛೋಕೆಯನಿನ್ನಯ | ಆಕಾರಕೆನಾ | ನೋಕರಿಸುವೆನಿದೊ | ನೀಕಡುಜರಿವುದು ‖ ೨ ‖ ಜಗಳಗಂಟಿನೀಂ | ಬಗೆಬಗೆಯಿಂದಲಿ | ಬೊಗುಳಲು ಜಯನರ | ಮೃಗಪತಿಮೆಚ್ಚನು ‖ ೩ ‖

ಹೆಣ್ಣಿನವರು.

ರಾಗ—ಬೇಹಾಗು. ಮಿಶ್ರಛಾಪು.

ಸರಿಯೆ ದೂರುವದಿದು ನಾರಿ | ಮಿತಿ | ಮೀರಿ ಬಜಾರಿ ‖ ಪಲ್ಲ ‖ ಬಳ್ಳೀ ತಿಂಡಿಗಳನ್ನು | ದೊಳ್ಳ-ಹೊಟ್ಟೆಗೆ ತುಂಬಿ | ಕೊಳ್ಳುತ ಚಿಳ್ಳೆಪಿಳ್ಳೆಗೆ ಕೊಟ್ಟೆ | ಹಳ್ಳಿ | ಕಳ್ಳರಪಿಳ್ಳೆ ‖ ೧ ‖ ದಿನಕೆಂಟುಸಾರಿಯಿಾ | ಮನೆಯೊಳು ತಿಂದು ಮೈ | ಘನವಾಗಿ ಕೊಬ್ಬಲು ಯಿಾಪರಿ | ನಿನ್ನ | ಮನ ಬಂದ ತೆರದಿ ‖ ೨ ‖ ಯೋಜನಗಂಧಿಯೆ | ಭೋಜನವನು ಮಾಡಿ | ನೀಜರಿಯುವದನು ನೋಡಿ | ಮೆಚ್ಚ | ನಾಜಯನೃಹರಿ ‖ ೩ ‖

ಗಂಡಿನವರು.

ರಾಗ—ಬೇಹಾಗು. ಮಿಶ್ರಛಾಪು.

ನಿಲ್ಲುನಿಲ್ಲಿಸು ಸಾಕು ನಲ್ಲೆ | ಬಲ್ಲೆ | ಸೊಲ್ಲನು ಖುಲ್ಲೆ ‖ ಪಲ್ಲ ‖ ಹೊಗೆಯ ವಾಸನೆ ಯನ್ನ | ಪಗುಳ

ನುಬಡಿಸಿದೀ | ಹಗರಣದೂಟಕೆ ಬಂದಿಹ | ರೆಲ್ಲ | ನಗು ತಿಹರಲ್ಲ || ೧ || ಲಾಡು ಮಾಡಿಹೆವೆಂದು | ಜೋಡಿಸುಳ್ಳ ನು ಹೇಳಿ | ಕಾಡೂಟಕೆಮ್ಮನದೇತಕೆ | ಕರದೀ | ಪಾಡು ಮಾಡದೆ || ೨ || ಅರಿಯದೆ ಬಂದುನಾ | ವರೆಹೊಟ್ಟೆ ವುಂಡೆವೀ | ಪರಿಯನು ಜಯನರಸಿಂಹನು | ಬಲ್ಲ | ನೊ ರೆವುದೇನಿಲ್ಲ || ೩ ||

ಹೆಣ್ಣಿನವರು.

ರಾಗ—ಜಂಗಲಾ. ಆದಿತಾಳ.

ದೂರುವರೇನೆಲೆ | ಘೋರಕಾರಿ ಬ | ಜಾರಿಯೆ ನೀನಿಂತು | ಕ್ರೂರೆಯೆ ಭೀಕರ ದಾರವದಿಂದಲಿ | ಚೀರಿಡು ತೀಪರಿಯೊಳ್ || ೧ || ಗಂಡನನೀ ನೋಡ | ಗೊಂಡು ದೊ ಡ್ಡಫೇಣಿ | ಮಂಡಿಗೆ ಲಾಡುಗಳ | ಸಂಡಗೆಗಳ ನೀ | ನುಂಡು ತೇಗುತೀ | ಭಂಡತನದಿ ಚಂಡಿ || ೨ || ಮೂಗಿನೊಳ ಗುಳುಂಗೆ | ಊಗಲುಬರುವ್ರೋಲ್ | ಬೇಗಬೇಗನುಂಡು || ಕಾಗಿಯ ಪುಗದ| ರಾಗವನೆತ್ತುತ | ಕೂಗುತಲೀವಿಧದಿಂ|| ೩ ||

ಗಂಡಿನವರು.

ರಾಗ—ಬೇಹಾಗು. ರೂಪಕ ತಾಳ.

ಕಾಟದೂಟ ಸಾಕು ಸಾಕು | ತಾಟಗಿತ್ತಿ ಬೀಗಿತ್ತಿ || ಪ || ಕೂಟವನ್ನು ಕೂಡುತೀ | ಪಾಟ ಕೂಗುತಿರುವರೆ || ಅ || ಅಡ್ಡಬಾಳೆಲೆಯ ಹಾಕಿ | ದೊಡ್ಡದೀಪವಿಡದೆಯಿ |

ಹೆದ್ದರೆಲ್ಲ ಕೂಡಿಕೊಂಡು । ಪದ್ದರಂತೆ ಕುಣಿವರು ॥ ೧
ಬೀಗರೈತರ್ಪರೆಂದು । ಬಾಗಿಲಲ್ಲಿ ನೀರನೀ । ನೀಗ ಕಾಲಿ
ಗೀಯದೇ । ಕೂಗುತಿಹರು ಕಾಗಿಯೋಲ್ ॥ ೨ ॥
ಬಂದು ನಾವು ಕೇಳದುದನು । ತಂದು ತಂದು ಬಡಿ.
ಸಿದೆ । ಹಿಂದುಮುಂದು ನೋಡುವರಿವ । ರಂದವೇನೊ
ತಿಳಿಯದು ॥ ೩ ॥

ಹೆಣ್ಣಿನವರು.

ರಾಗ—ಮೋಂಜಿ. ಮಿಶ್ರಛಾಪು.

ಹೀಗೆಂಬರೇನೆ ಬೀಗಿತ್ತಿ ನೀಂ ॥ ಪ ॥ ಬಾಗಿದ ತಲೆ
ಯ ಮೋ । ಲಾಗಿ ಎತ್ತದೆ ತಿಂದು ॥ ಅ ॥ ಪಳದ್ಯದೊಳದ್ದಿ ।
ಕೊಳುತಾಂಬೊಡಿ । ಗಳ ತಿಂದು ಬಿದ್ದೀ ॥ ಎಲೆ ದೊನ್ನೆ
ಗಳ ತಿಂಬ । ಕಲಿರಾಯನ ನಾರಿ ॥ ೧ ॥ ಹೋಳಿಗೆಗಳನು ।
ಜೋಳಿಗೆಯೊಳು । ಮೇಲಾಗಿ ತುಂಬಿ ॥ ಕಾಳಿಯೆ ಗಂಡನ ।
ಮೇಲೆ ಹೊರಿಸುತ ಕಳುಹಿ ॥ ೨ ॥ ಪರಿಪರಿಭಕ್ಷ್ಯ । ಪರ
ಗಳನು ತಿಂ । ದರಗಿಸಿಕೊಳದೆ ॥ ಬರಿದೆ ನೀನು ಜಯು ।
ನರಹರಿಭಕ್ತರ ॥ ೩ ॥

ಗಂಡಿನವರು.

ರಾಗ—ಖರಹರಪ್ರಿಯ. ಮಿಶ್ರಛಾಪು.

ಅರಿಯದೆ ಬಂದೆವೀ । ದುರುಳರ ಗೇಹಕೆ । ಪ ॥
ತರಳರಿಗನ್ನವೆ । ದೊರೆಯದೆಹೋಯಿತು ॥ ಅ ॥ ಸಾರಸು

ಕೇಳಲು। ನೀರನು ತರುವರು । ನೀರನು ಕೇಳಲು। ದೂರು ವರೆಂಬರು ॥ ೧ ॥ ಲಾಡನು ಕೇಳೆ ಕ್ಯೆ । ಯಾಡಿಸುತಿರ್ಪ ರಾಂ । ಬೋಡೆಯ ಕೇಳೆ ಕ್ಯೆ । ಜೋಡಿಸುತಿರ್ಪರು ॥ ೨॥ ಹಾಲನು ಕೇಳಲು । ಕೋಲನು ತರುವರು । ಮೇಳವಿಸಿ ಶಂತೀ । ಪೂಳರ ಸಂಗವು ॥ ೩ ॥

ಹೆಣ್ಣಿನವರು.

ರಾಗ—ಶಿರಹರಪ್ರಿಯ. ಮಿಶ್ರಛಾಪು

ಆಡಿದೆ ಯೇನನು । ನೋಡದೆ ಬೋಡಿಯೆ ॥ ಪ ॥ ಲಾಡುಗಳನು ಪುಡಿ । ಮಾಡಿ ಸಕ್ಕರೆತುಪ್ಪ । ಕೂಡಿಸುತ್ತ ತಿಂದು ತೇಗಿ । ಹಾಡನೊಂದನು ಹೇಳದೆ ॥ ೧ ॥ ಮಂಡಿಗೆ ಬುಟ್ಟಿಯನೆಳ । ಕೊಂಡು ಚಂಡಿಯೆ । ಖಂಡ ಸಕ್ಕರೆ । ಭಾಂಡವನ್ನು ಕೊಂಡು ತಿಂದು । ಗಂಡುಬೀರಿಯೆ ಭಂಡೆಯೆ ॥ ೨ ॥ ನೂರುಫೇಣಿಗಳನ್ನು । ಚೂರುಮಾಡದೆ ತಿಂದ । ಘೋರೆ ನಿನ್ನಯ ರೀತಿಯ ಜಯ । ನಾರಸಿಂಹನೆ ಬಲ್ಲನು ॥

ಗಂಡಿನವರು.

ರಾಗ—ಶಿವಹರಪ್ರಿಯ. ಮಿಶ್ರಛಾಪು.

ಸಾಕುಸಾಕೀಬರಿ । ಯೋಕಾರದೂಟವು ॥ ಪ ॥ ಹಾಕದೆಕೇಳ್ದುದ । ನೂಕುವಳೀಕೆಯು ॥ ಅ ॥ ಬಂದಿಹ ಬೀಗರ । ಮುಂದೆಡೆದೀಪವ । ತಂದಿರಿಸ ದೀಪರಿ । ನಿಂದಿಸು

ತಿರುವಳು ॥ ೧ ॥ ಸಾಲುಸಾಲಿಗೆ ದೊಡ್ಡ । ಬಾಳೆ ಲೆಗಳ ಹಾಕಿ । ಹಾಲುಸಕ್ಕರೆತುಪ್ಪ । ಹೋಳಿಗೆ ಕೇಳಳು ॥ ೨ ॥ ಸಕ್ಕರೆತುಪ್ಪವ । ನಕ್ಕರದಿಂ ಚಿಕ್ಕ । ಮಕ್ಕಳು ಕೇಳಲು । ಧಿಕ್ಕರಿಸುವಳು ॥ ೩ ॥ ಅನ್ನವ ಕೇಳಲು । ಸನ್ನೆಯ ಮಾಳ್ಪಳು । ಕುನ್ನಿಯಂತೀ ಬರಿ । ದೊನ್ನೆಯ ತೋರ್ಪಳು ॥ ೪ ॥ ಹೀನೆಮುಪ್ರಸ್ತನಿ । ದಾನವ ಬಲ್ಲನು । ದೀನಪ ಶ್ರೀ ಜಯ । ಮಾನುಷಸಿಂಹನು ॥ ೫ ॥

## ಹೊಣ್ಣನವರು.

ರಾಗ—ಹುಸೇನಿ. ಮಿಶ್ರಛಾಪು.

ಏಳು ವ್ರೊಟ ಸಾಕು ಹೋಳೆ । ನಿನ್ನ । ಪಾಳಯ ಮನು ಕೂಡಿ ದುರ್ಜನ ಬಾಲೆ ॥ ಪ ॥ ಸಕ್ಕರೆಚೀಲವಮುಗಿಸಿ । ಹಸಿ। ಅಕ್ಕಿತಿಂದು ನೆಲವ । ನೆಕ್ಕುತಲಿರುವೇಯು ॥೧॥ ಪೆರೆಮಾನ್ನಭಾಂಡವ ಕುಡಿದು । ಈಗ । ತರಗಿನ ದೊನ್ನೆಯು । ಹರಕೊಂಡುತಿನುವೆಯು ॥ ೨ ॥ ಹೋಳಿಗೆರಾಸಿಯ ತಿಂದು । ದೊಡ್ಡ । ಬಾಳೆಲೆಗಳನೆಲ್ಲ । ಸೀಳುತ ತಿನುವರೆ ॥ ॥ ೩ ॥ ಮಂಡಿಗೆಗಳ ತಿಂದು ತೇಗಿ । ರುಬ್ಬೊ । ಗುಂಡನು ನುಂಗಲು । ಛಂಡೆ ನೀ ಬರುವೆಯು ॥ ೪ ॥ ಪರಿಪರಿಪಲ್ಯವ ತಿಂದು । ನೀನು ॥ ಹುರಿಯೋಡ ಕಡಿವೆಯು । ನರಹರಿಯ ನ್ನೂತ ॥ ೫ ॥

## ಗಂಡಿನವರು.

ರಾಗ—ಹಿಂದುಸ್ಥಾನಿ ಮುಖಾರಿ. ಆದಿತಾಳ.

ದೂರು ಮಾಳ್ಪರೇನೆ ಕತ್ತಿ । ಘೋರೆಯಾದ ಬೀಗಿತ್ತಿ ॥ ಪ ॥ ಸೋರು ದೊನ್ನೆಯಲ್ಲಿ ತುಂಬಿ । ನೀರು ಮಜ್ಜಿಗೆ ಬಡಿಸಿ ॥ ಅ ॥ ಬಂದಿರುವ ಬೀಗರ । ಮುಂದೆ ಬಂದು ಹೋಳಿಗೆ । ತಂದೆನೆಂದು ತೋರಿಸುತ । ಹಿಂದಿಯೆಂತೋಡಾಡುತ ॥ ೧ ॥ ಲಾಡನೆಲ್ಲ ಮಕ್ಕಳ । ಕೂಡಿ ನೀನೆ ತಿಂದು । ಮಾಡಲಿಲ್ಲವೆಂದು ಕೈಯ । ಲ್ಲಾಡಿಸುತ್ತ ಖೋಡಿಯೆ ॥ ೨ ॥ ತುಪ್ಪವನ್ನು ಕೇಳದೆ । ಹಪ್ಪಳವ ತೋರದೀ । ತಪ್ಪುಗಳ ನರಹರಿ । ಯೊಪ್ಪುತಿರ್ಪನೇನೆ ॥ ೩ ॥

## ಹೆಣ್ಣಿನವರು.

ರಾಗ—ಹಿಂದುಸ್ಥಾನಿ ಮುಖಾರಿ. ಆದಿತಾಳ.

ಭೋಜನವ ಮಾಡೆ ಬಜಾರಿ । ಜೂಜುಗಾರನನಾರಿ ॥ ಪ ॥ ಮೋಜಿನೇತಕೇ ಖಳೆ । ಸಾಜದಿಂದಲೀಗಳೆ ॥ ಅ ॥ ಬಾಲ ಸಂತತಿಯು ಕೂಡಿ । ಹೋಳಿಗೆಯ ಪುಡಿ ಮಾಡಿ । ಹಾಲು ತುಪ್ಪದೊಳು ಕಲಸಿ । ಕೀಳು ಮೇಲು ನೋಡದೆ ॥ ೧ ॥ ಮಂಡಿಗೆಗಳನ್ನು ಹಾಗೆ । ಉಂಡು ತಿಂದು ತೇಗೆ । ಕಂಡಕಂಡಜನರಿಗೆ । ಕೊಂಡುಹೋಗತ್ತಿಗೆ ॥ ೨ ॥ ಸಾರವಾದ ಭಕ್ಷ್ಯವ । ಸೇರದೆಂದು ಚೆಲ್ಲುವ । ಘೋರೆ ನಿನ್ನ ರೀತಿಯೆಲ್ಲ । ನಾರಸಿಂಹ ಬಲ್ಲ ॥ ೩ ॥

ರಾಗ—ಜಾಂಜೋಟಿ. ರೂಪಕತಾಳ.

ಘಾಕ ರೂಪೆ । ಕಾಕಾಲಾಪೆ । ಸಾಕು ನಡಿ ನಡಿ । ಛೀ ಛೀ ॥ ಪ ॥ ಕಾಲು ಡೊಂಕು ಡೊಂಕಾಗಿ ಟ್ಟು । ಕಾಳ ಸೀರೆಯುಟ್ಟು । ಮೇಲು ಬೀದಿ ತಿರುಗುವ ಗೈ । ಯಾಳಿತನವ ಬಲ್ಲೆನು ॥ ೧ ॥ ತಿರುಗಿದ ಕೊರಳಲ್ಲಿ ಭಾರಿ। ಸರಿಗೆಯನು ಬಜಾರಿ । ಧರಿಸಿ ಪರರ ಮನೆಗೆ ಹೋಗಿ । ಬರುವ ತಿರುಕಿದುಡುಕಿದೇಂ ॥ ೨ ॥ ಅತ್ತೆಯ ಕುತ್ತಿಗೆಯ ಪಿಡಿಯು । ತೊತ್ತಿನುಕುತ । ಮತ್ತನಾದ ಪತಿಗೆ ದು । ರ್ವೃತ್ತ ಕಲಿಸಿದಾ ॥ ೩ ॥

ರಾಗ—ಜಾಂಜೋಟಿ. ರೂಪಕತಾಳ.

ಕತ್ತೆ ಬೀಗಿತ್ತಿ ಪಿತ್ತನೆತ್ತಿ ಹತ್ತಿತೊ । ಛೀ ಛೀ ॥ ಪ ॥ ಬಾಯಿಬಂದ ಹಾಗೆ ನೀನು । ಹೇಯಬುದ್ಧಿಯಿಂ । ನಾಯಿಯಂತೆ ಬಗುಳುತಿಹೆಯು । ಮಾಯಕಾರಿಯೆ ॥ ೧ ॥ ಕರದು ಕರದು ತೆರಳಿರೆಂದು । ದುರುಳೆ ನುಡಿಯುವೀ । ತೆರನಿದೇನು ನಿನಗೆಯೆ । ಚ್ಚರಿಕೆ ಯಿಲ್ಲವೊ ॥ ೨ ॥ ನಾಲಿಗೆ ನಿಜಕುಲದಪರಿಯು । ಹೇಳುತೆನ್ನ ಪೋಲ್ । ಖೂಳನಿನ್ನಂತೆ ನಾವು । ಪೋಲಿಯಲ್ಲವು ॥ ೩ ॥

ರಾಗ—ಕರ್ಜಾ. ಆದಿತಾಳ.

ಎಲೆ । ನಾರಿ ನಿನಗೆ ಸರಿಯಾರೆ । ಈ । ಧಾರುಣಿಯೊಳು ಬಹು । ಘೋರೆ ಬಜಾರಿ ॥ ಅ ॥ ಊಟದ ಬಗೆ

ಬಲು | ಕಾಟವಾದುದು ನಿನ್ನ | ಕೂಟವು ಚಿಕ್ಕ ಮಕ್ಕಳಿ
ಗಾಟವಾದುದು ॥ ೧ ॥ ತೋರಿ ತುಪ್ಪವನಭಿ | ಘಾರವ
ಮಾಡುವ | ಧಾರಾಳತನವೆಲ್ಲ | ತೋರಿತು ಜನಕೆಲ್ಲ ॥೨॥
ಮುಗ್ಗಲನ್ನವುಸೀದ | ಹುಗ್ಗಿಯುಬಡಿಸುತ | ನುಗ್ಗೇಸೊಪ್ಪಿ
ನ ಪಲ್ಯ | ಕೊಗ್ಗರಿಸದೆತಂದ ॥ ೩ ॥

ರಾಗ—ಘರ್ಜ್. ಆದಿತಾಳ.

ಹೀಗೆಂಬರೇನೆಲೆ ಕಾಗಿ | ಜೂಳಿ | ಬೀಗಿತ್ತಿ ತಲೆ
ಯನು | ಬಾಗಿಸು ಛೀ ಕತ್ತಿ ॥ ಪ ॥ ಕೈಯಹಾರೆತಿಂದು
ತೇಗಿ | ಹಿಯಾಳಿಸುವೆಯು | ವೈಯಾರವೇತಕೆ | ಗೈಯಾ
ಳಿ ಬಾಯಾಳಿ ॥ ೧ ॥ ಮಂಗಡೆ ರಾವಣನ | ತಂಗಿಯಂ
ದದಿತಿಂದು | ಹಂಗಿಪುದುಚಿತವೆ | ಕಂಗಾಳಜನದಂತೆ ॥೨॥
ಬೇಕಾದ ಭಕ್ಷ್ಯವ | ಹಾಕಿಸಿಕೊಂಡು ತಿಂದು | ಓಕರಿಸುತ
ನಿನ್ನ | ಝೋಕನು ತೋರಿಸುತ ॥ ೩ ॥

ರಾಗ—ಹಿಂದುಸ್ಥಾನಿಕಾಪಿ. ಆದಿತಾಳ.

ಅರಿಯದೆಬಂದೆವಲ್ಲ | ಕರದುದೂರುವರಲ್ಲಿ ॥ ಪ ॥
ಜೂಳಿ ಬೀಗಿತ್ತಿ ವಂದು | ಹೋಳಿಗೆ ಚೂರು ತಂದು |
ಬಾಲಗೆಬಡಿಸದೆ ! ಜಾಲವ ತೋರುವಳು ॥ ೧ ॥ ಕೋ
ಡಗಬೀಗನು | ಲಾಡನು ತಂದೆನೆಂದು | ಓಡಾಡುತಿಹನಲ್ಲ |
ಕಾಡೂಟವಾಯಿತಲ್ಲ ॥೨॥ ನೀರುಮಜ್ಜಿಗೆ ಹಾಕಿ | ಹಾರಾ
ಡುತಿರ್ಪರೀ | ಘೋರರಿರವಜಯು | ನಾರಸಿಂಹಬಲ್ಲನು ॥೩॥

ರಾಗ—ಹಿಂದುಸ್ತಾನಿಕಾಪಿ. ಆದಿ ತಾಳ.

ಇತ್ತನೋಡು ಅತ್ತಿಗೆ । ಪಿತ್ತಹತ್ತಿತೊ ನೆತ್ತಿಗೆ ॥ಪ॥ ಓೋ ಡಿನಿನ್ನ ಬಾಂಧವರು । ಕೂಡುತೆಲ್ಲ ತಿಂದರು । ನಾಡೆ ಮುಗಿಯದಿರುವಾಂ । ಜೋಡೆಯರಾಶಿಯು ॥ ೧ ॥ ದುರ ಳೆಯೆ ನಿನ್ನನೆಂ । ಟರು ಮೂರುತಿಂಗಳ । ವರಿಗೂತಿಂದರು ಮುಗಿಯ । ದಿರುವ ಫೇಣಿಗಳನ್ನು ॥ ೨ ॥ ತಾಟಕಿನಿನ್ನ ಕುಲ । ಕೋಟಿತಿಂದು ತೇಗಲೀ । ಪಾಟ ಮಾಡಿರುವ ಚಿ । ರೋಟಿಯಬೆಟ್ಟವ ॥ ೩ ॥

ರಾಗ—ಜೇಹಾಗು, ಆದಿತಾಳ.

ನೋಡಿರಿ ಜನರೆಲ್ಲ । ಓಡಿಬೀಗಿತ್ತಿಯು । ಲಾಡು ತಿನ್ನುತಾಡುವಾಟಗಳ ॥ ಪ ॥ ಅಂಚು ಮಡಿಸಿ ಕಚ್ಚೆ । ಸಂಚಾಗಿ ಹಾಕುತ । ಮುಂಚೆಯೆ ಲಾಡು ಚಿರೋಟಿಗಳ । ಮಂಚದಕೆಳಗಿಟ್ಟು । ವಂಚಿಸಿಸುತರಿಗೆ । ಕೊಂಚವುಕೊ ಡದೇ ತ್ರಿಂದಿಹಳು ॥ ೧ ॥ ಮುತ್ತಿನ ಸರವನು । ಕುತ್ತಿಗೆ ಯೊಳು ಹಾಕಿ । ಸುತ್ತಲು ಝಾಕಾಗಿನೋಡುತ । ಕತ್ತೆ ಇವಳುಸರಿ । ಹೊತ್ತಿನೊಳನ್ನದ । ತುತ್ತನುಂಗಿ ನುಂಗಿ ತೇಗಿದಳು ॥ ೨ ॥ ಹುಡುಗರೊಡನೆ ಬೀದಿ । ನಡವಿಯೊಳ ನ್ನವ । ಗಡಿಗೆಯೊಳ್ಕಲಸುತ ನುಂಗುತ । ಮಡಿಮಡಿ ಯೆಂ ದಿಲ್ಲಿ।ಗಡಬಿಡಿಮಾಡುವಳೀ । ಕೆಡುಗಿಯರೀತಿಯ ಸಡಗರವ॥

ರಾಗ—ಬಿಹಾಗು. ಆದಿತಾಳ.

ನೀತಿವಂತೆ ನಿನ್ನ । ರೀತಿಯು ಬಲ್ಲೆನು । ಏತಕೆ ನನ್ನನು ದೂರುವೆ ॥ ಪ ॥ ಮಾಡಿದ ಪ್ರಸ್ತದ । ಲಾಡುಗಳನು ಪುಡಿ । ಮಾಡುತ ಸಕ್ಕರೆಯೊಳು ಕಲಸಿ । ಗೂಡೆಯೊಳಗೆ ತುಂಬಿ । ಗೋಡೆಯ ಹಿಂದೆ ನಿಂತು । ಗಾಡನೆ ತಿಂದುದ ಮರತೆಯೊ ॥ ೧ ॥ ಸಾರಿಗೆಂಟುಕೊಡ । ನೀರನು ಸೇರಿಸಿ । ಸೋರುವ ದೊನ್ನೆಯೊಳಗೆ ಹಾಕಿ । ತೋರದೆ ಭಕ್ಷ್ಯದ । ಚೂರುಗಳನು ಬಡಿದೆ । ಹಾರಾಡುತ ನನ್ನ । ದೂರುವೆ ॥ ೨ ॥ ಈಕೆ ಮಾಡಿದ ಪ್ರಸ್ತದೂಟವ ಸ್ಮರಿಸಲು । ಓಕರಿಕೆಯು ಬರುತಿಹುದೆನಗೆ । ಸಾಕುಸಾಕೀಯುವಿ ವೇಕಿಯ ಸಂಗವು । ಶ್ರೀಕರ ಜಯನರಸಿಂಹನೆ ॥ ೩ ॥

ರಾಗ—ಶಂಕರಾಭರಣ. ಮಿಶ್ರಚಾಪು.

ಸೈರಿಸು ಸೈರಿಸು । ಸೈರಿಸು ನೀನು ॥ ಪಲ್ಲ ॥ ಮೀರಿತಿನ್ನಲು ಬರು । ವೇರುಬ್ಬಸವನು ॥ ಅನು ॥ ಪರಿಪರಿ ಭಕ್ಷ್ಯವ । ಸರಿಮಿಗಿಲರಿಯದಾ । ತುರದಿ ನಿನ್ನಯ ಮಜ್ಜಿಗೆ । ದರಕೆ ತುಂಬಿದ ಕಷ್ಟ ॥ ೧ ॥ ಸುರುಳಿ ಹೋಳಿಗೆಗಳು । ಅರಗದಿದ್ದರೆ ನಿನ್ನ । ಚರಣದೊಳಗೆ ದೊಡ್ಡ । ಬರೆಯ ಹಾಕಿಸುವೆನು ॥ ೨ ॥ ಕುಡಿದ ತುಪ್ಪವು ನಿನ್ನ । ಪೊಡೆಯಲ್ಲಿ ಕರಗದಿ । ದ್ದೊಡೆ ಸುಂಟಿಬೆಲ್ಲವ । ಕೊಡುವೆ ಸಂಕಟವನ್ನು ॥ ೩ ॥

ರಾಗ—ಶಂಕರಾಭರಣ. ಮಿಶ್ರಚಾಪು.

ಸರಿಯೇನೆ ಸರಿಯೇನೆ । ದುರುಳೆಬೀಗಿತ್ತಿ ॥ ಪ ॥ ಬರಿಯುಮಾತಿನೊಳಿಂತು । ಕರಕರೆ ಪಡಿಪುದು ॥ ಅನು ॥ ಹಸುಳೆಗನ್ನವನು ಬ । ಡಿಸಲಿಲ್ಲವೆಂದೆವು । ಹಸಿವೆ ಸೈಸದೆ ನಾವು । ಬಸವಳಿಯುವೆವಲ್ಲ ॥ ೧ ॥ ಊಟಕೆ ಕರೆದು ಚಿ । ರೋಟಿಯು ಹಾಕದೆ । ಕೋಟಲೆ ಗೊಳಿಪುದು । ತಾಟಕಿ ನಿನಗಿದು ॥ ೨ ॥ ಬರಿಯನ್ನವಿಲ್ಲದಿ । ದ್ವರು ಮಾತಿನೊಳಗಿಂತು । ಹರಟಲು ಮೆಚ್ಚನು । ನರಹರಿರೂಪನು ॥ ೩ ॥

ರಾಮದೇವರು ಕನಸನ್ನು ಕಂಡ ಹಾಡು.

ರಾಗ—ಆನಂದಭೈರವಿ. ಮಿಶ್ರಚಾಪು.

ಕನಸಕಂಡನು ರಾಮಚಂದ್ರ । ಗುಣಸಾಂದ್ರ । ವರ । ಕನಕಮಂಚದಮೇಲೆ ಮಲಗಿರುವಾಗ ॥ ಪ ॥ ಇನಕೋಟಿ ಭಾಸುರ । ಘನತರನವರತ್ನ । ವಿನುತಮಂಚದಿ ನಿದ್ರೆ । ಯನು ಮಾಳ್ಪ ಸಮಯದಿ ॥ ಅ ॥ ಹಾಲೋಗರವನುಂಡು ರಾಮ । ರಿಪುಭೀಮ । ಪರಿ । ಪಾಲನವರಗುಣ । ಲೋಲನು ಕರುಣಾ ॥ ವಾಲನುರುಚಿರಾಂಸ । ಶಾಲಿಯು ವರಹಂಸ । ತೂಲಿಕಾಶಯನದ । ಮೇಲೆ ಮಲಗಿರುವಾಗ ॥ ೧ ॥ ಶ್ರೀ ರಾಮನಾಗ ಸುಭದ್ರಾ । ಪಾರಸಿದ್ರಾ । ಭಾರ । ವೇರೆ ಮಲಗಿರಲು । ದಾರ ಮಂಚದೊಳು ॥ ಸಾರನಾರಂಗಸಹ ।

ಕಾರಾದಿ ಫಲಗಳ । ಚಾರುಪಾಣಿಯೊಳಾಂತು । ಧೀರರು ಕೊಡುವಂತೆ ॥ ೨ ॥ ಚಿನುಮಯನೆಚ್ಚತ್ತು ಬಂದು । ಜನನಿಗಂದು । ನಮಿಸಿ । ಕನಸಿನಪರಿಯನು । ನೆನದು ಬಿನ್ನವಿಸೆ ॥ ತನುಜಾತನಿನ್ನಯ । ವನಿತೆ ರುತುಮತಿಯಾಹ । ಳೆನಲು ಸಂತಸವಾಂ । ತನುಜಯ ನರಸಿಂಹ ॥ ೩ ॥

## ಕೃಷ್ಣದೇವರು ಕನಸುಕಂಡ ಹಾಡು.

ರಾಗ—ಮಧ್ಯಮಾವತಿ. ಆದಿತಾಳ.

ಕನಸನು ಕಂಡನು ಪಾಲನದಕ್ಷ । ವನಜಾಕ್ಷ । ಚಿನುಮಯ ರೂಪನು ಸುಗುಣಶಾಲೀ । ವನಮಾಲಿ ॥ ಪ ॥ ವಿನಮಿಸುತಲಿ ಬೊ ಮ್ಮನರಾಣಿಗೆ ಹೇರಂ । ಟನಪಾದಾಂಬುಜವನ್ನು ॥ ನೆನೆಯುತಪೇಳ್ವನು ಶೌರಿಯು ಕಂಡಾ ಕನಸಿ । ನನುವನ್ನು ॥೧॥ ಜಲಜಾದುತಾಕ್ಷನು ಚೆಲಿ ಪಾಲನ್ನವನುಂಡು । ಸುಲಲಿತ ಮಂಚದೊಳೇ ಮಲಗಿರೆ । ಮಲಗಿರಲೆರಡನೆ ಜಾವವು ಕಳೆಯೇ । ಲಲಿತಾಂಗ ॥ ೨ ॥ ಸೀವೆರಸಿದ ತುಪ್ಪಾನ್ನದ ಸೇವನೆಯನುವಮಾಡೀ । ದೇವೇಂದ್ರ । ದೇವನು ಸುಖನಿದ್ರೆಯೊಳೇ ಮಲಗಿರೆ । ಗೋವಿಂದ ॥ ೩ ॥ ಸಾರಪರೀಮಳ ಪಾ ಟೀರಮನೋಹರಪುಷ್ಪ । ಹಾರಸಹಕಾರಾದಿ । ಫಲವಾರ ॥ ವಾರವಧೀರರರು ತನ್ನಯ । ಸಾರಸಕರದೊಳ್ ಕೊಡುವಂತೆ ॥ ೪ ॥ ಈ ವಿಧ ಸುಸ್ವಪ್ನವನು ದೇವನು ಕಾಣುತ್ತ । ಭಾವದೊಳಾಲೋಚಿಸುತಾ। ದೇವಕೀ। ದೇವಿಗೆ ನಮಿಸುತ ಬಿನ್ನವಿಸೆ । ತೀವಿದಾ ಕನಸನ್ನು ॥ ೫ ॥

ಕೇಳುತಲಾ ದೇವಕಿಯು | ತಾಳುತಮುದವನ್ನು | ಪೇಳಿ ದಳು ಹರಿನಿನ್ನಾ |ಲೋಲಾಕ್ಷಿ || ಲೋಲಾಕ್ಷಿಯುಸ್ತ್ರೀಧರ್ಮ| ಶಾಲಿನಿ ಯಾಗುವಳೆಂತೆಂದು || ೬ || ಈ ರೀತಿಯಿಂದಲಾ ನಾರಿಯುಪೇಳಲು | ಶೌರಿಯಾನಂದಾ | ಪಾರವ | ಧೀರನು ಜಯನರಹರಿಯಾಂ | ತಾರೀತಿಯೊಳಿರುತಿರೆ || ೭ ||

## ಸ್ತ್ರೀಧರ್ಮಿಣಿಯಾದ ಹಾಡು.

ರಾಗ—ಕೇತಾರಗೌಳ. ಮಿಶ್ರಚಾಪು.

ಗಾಡಿಕಾತಿಯರೆಲ್ಲರು | ಕೂಡುತ ಸೀತೆಗೆ | ಪಾಡಿರೆ ಶೋಭನವ || ಪ || ಚಿತ್ತಜಜನಕನು | ಲೆತ್ತವನಾಡಲು | ಮತ್ತಕಾಶಿನಿಯನೀ | ನಿತ್ತಬರಹೇಳೆನೆ || ೧ || ಸನ್ನುತ ಚತುರಂಗ | ವನ್ನಾಡೆಸೀತೆಯ | ಮುನ್ನಮೆ ಕರೆತನ್ನಿ | ರೆನ್ನುತ ನುಡಿಯಲು || ೨ || ಸದಯನಾಡಿದಮಾತ | ಸುದತಿಯರ್ಕೇಳುತ | ಪದುಳದಿಬಿನ್ನವಿ | ಸಿದರಾಸೀತೆಗೆ ||೩|| ಹೇಳಿದಮಾತನು | ಕೇಳುತ ಜಾನಕಿ | ಹಾಲೋಗರವನುಂಡು | ಲೋಲಾಕ್ಷಿ ಬರುತಿರೆ || ೪ || ಧರಣಿಜಾತೆಯು ಬರು | ತಿರಲು ತಿರುಗಿನೋಡಿ | ಸರಸಿಜನೇತ್ರನು | ಕರಲಾಘವವನಿತ್ತು || ೫ || ಸನ್ನುತಾಂಗಿಯೆ ದಾಯ | ವನ್ನುನಿನ್ನೊಡನಾಡ | ಲೆನ್ನುತ ಕರಸಿದೆ | ನೆನ್ನ ಮೋಹನ್ನೆ||೬|| ಕಾಯಿಗಳನುಹೂಡಿ| ದಾಯವನಾಡುತ | ತೋಯಜಾಕ್ಷನೊಡ | ನಾಯತಲೋಚನೆ || ೭ || ಪದುಳದಿಂದಲಿಗೆಲೆ | ಸದಯರಾಮನುಸೀತಾ| ವದನವನೋಡಿ ಮಂ | ದಹಾಸದಿ

ಮಲಗಲು ॥ ೮ ॥ ಘನವಂಶಾಂಬುಧಿಚಂದ್ರ । ವಿನುತ ರಾಮಚಂದ್ರ । ವಿನಯದಿಂದಪ್ಪಣೆ । ಯನು ಕರುಣಿಸೆ ನುತ್ತ ॥ ೯ ॥ ನಾಗವೇಣಿಯು ನಮಿಸಿ । ಬೇಗದಿ ಬರುತಿರ । ಲಾಗಸ್ತ್ರೀಧರ್ಮಿಣಿ । ಯಾಗಲು ಜಾನಕಿ ॥ ೧೦ ॥ ಭೂ ಸುತೆನೆರೆಯೆ ಸು । ವಾಸಿನಿಯರು ಕಂಡು । ಕೌಸಲ್ಯಾ ದೇವಿಗೆ । ಲೇಸುಬಿನ್ನವಿಸಲು ॥ ೧೧ ॥ ಅಸವಸದಿಂದಜೋ । ಯಿಸರನ್ನು ಕರೆಯಿಸಿ । ಬೆಸಗೊಳ್ಳೆವಿಪ್ರನಿಂ । ತುಸುರಿದ ನಾಗ ॥ ೧೨ ॥ ತದಿಗೆಸೋಮವಾ । ರದ ಹಸ್ತನಕ್ಷತ್ರ । ವಿದುಬಲುವಚ್ಛುತ । ಭ್ಯುದಯಭಾಗ್ಯದವೆನೆ ॥ ೧೩ ॥ ಅಸವಸದಿಂ ಕೇಳಿ । ವಿಸಮಾನಂದವತಾಳಿ । ಬಿಸಜಾಕ್ಷಿಯರ ಕರೆ । ಯಿಸುತಿರೆಬೇಗದಿ ॥ ೧೪ ॥ ದಯಿತೆಯರ್ಪರಿಮಳಾ । ನ್ವಯದೋಕುಳಿಯನತಿ । ಶಯದಿಂದಹಾಕಿದ । ಜಯ ನರಸಿಂಹಗೆ ॥ ೧೫ ॥

## ಸ್ತ್ರೀಧರ್ಮಿಣಿಯಾದ ಹಾಡು.

ರಾಗ—ಸೌರಾಷ್ಟ್ರ. ಮಿಶ್ರಚಾಪು.

ಸಾರಸಾಕ್ಷಿಯರೆಲ್ಲ । ಸೇರುತೊಂದೆಡೆಯೊಳ್ । ನಾರಿರುಕ್ಮಿಣಿಗೆ ಶೋಭನಪಾಡಿದರು ॥ ಪ ॥ ಇಂದುನಾಂ ಪಗಡೆಯನು । ಚಂದದಿಂದಾಡೆ । ಸುಂದರೀಮಣಿಯಕರೆ । ಯೆಂದನಾ ಹರಿಯು ॥ ೧ ॥ ಸಾರಸಂತೋಷದೊಳು । ಸಾರ ಕಿಯನಾಡೆ । ನಾರಿರುಕ್ಮಿಣಿಯಕರ । ತಾರೆನೀನೆನಲು ॥ ೨ ॥ ಸಿತಕರಾನನೆಯೊಡನೆ । ಚತುರಂಗವಾಡೆ । ಕುತಕದಿಂ ಬರ

ಹೇಳಿ । ನುತ ಹರಿಯು ಪೇಳೆ ॥ ೩ ॥ ಕೆಳದಿಯೋರ್ವಳು ಬಂದು । ಲಲನೆರುಕ್ಮಿಣಿಯು । ಬಳಿಯೊಳಗೆ ನಿಂತುಕ್ಷೇ । ಳ್ದ ಳು ಹರ್ಷದಿಂದ ॥ ೪ ॥ ರಾಜಮುಖಿಕೇಳುತ್ತ । ಭೋಜನವ ಮಾಡಿ । ಸೌಜದಿಂನಡೆತರಲು । ರಾಜಸದನಕ್ಕೆ ॥ ೫ ॥ ತರುಣಿರುಕ್ಮಿಣಿಬರುವ । ಪರಿಯನ್ನು ನೋಡಿ । ಕರಲಾಘ ವವ ನಿತ್ತು । ಸರಸಿಜಾಂಬಕನು ॥೬॥ ಗಾಡಿಕಾತಿಯೆಸಿನ್ನ। ಕೂಡೆಪರಿಪರಿಯೋಳ್ । ಅಡೆಕರೆಯಿಸಿದೆದಯ । ಮಾಡಿದೆ ಯನೀನು ॥೭॥ ಸುತ್ತ ಕಾಯ್ಗಳಹೂಡು । ತತ್ತ ದಾಳವನು ಮತ್ತ ಕಾಶಿಸಿಪಿಡಿದು । ಲೆತ್ತವಾಡಿದಳು ॥ ೮ ॥ ಹೂಡಿದ್ದ ಕಾಯಿಗಳ । ನಾಡೆಹರಿಸೋಲೆ । ಗಾಡಿಕಾತಿಯುಮುಖವ । ನೋಡಿನಸುನಗಲು ॥ ೯ ॥ ಮಣಿಮಂಚಮಧ್ಯದ । ಲ್ಲಣಿಯ ರದಿಕುಳಿತಾ । ಗುಣನಿಧಿಯನೋಡಿರು । ಕ್ಮಿಣಿಯು ನಸು ನಗುತ ॥ ೧೦ ॥ ಈಗಲೆನ್ನಯ ಮನೆಗೆ । ಪೋಗುವೆದಯಾ ನು । ರಾಗನೀನಪ್ಪಣೆಯ । ಬೇಗಕರುಣಿಪುದು ॥ ೧೧ ॥ ಎಂದುವಂದಿಸುತಾಗ । ಸುಂದರಿಯುಬೇಗ । ಚಂದದಿಂಬರು ತಿರಲ । ಮಂದಮುದದಿಂದ ॥ ೧೨ ॥ ಪತಿಯನಾಂ ಗೆದ್ದೆ ನೆ । ನ್ನುತಲಿ ಸಂತಸದಿಂ । ಸಿಕರಾನನೆ ಪುಷ್ಪ । ವತಿಯ ಳಾದಳಾಗ ॥ ೧೩ ॥ ಭಾವೆಯರು ತಿಳಿದವನು । ದೇವಕಿಯ ಬಳಿಗೆ । ತಾವೆಬಂದುಸುರಿದರು । ಈ ವಿಭವದಿರವ ॥ ೧೪ ॥ ತರುಣಿದೇವಕಿ ಕೇಳಿ । ಹರಿಸವನುತಾಳಿ । ಗುರುಗಳಾಗಿಹ ಜೋಯಿ । ಸರನು ಕರೆಯಿಸುತ ॥ ೧೫ ॥ ದಿನಶುದ್ಧಿಯನು ನೋಡಿ । ಲೆನುತಬೆಸಗೊಳಲು । ಮನದಿ ಭಾವಿಸಿ ಪೇಳ ।

ದನು ವಿಪ್ರವರನು ॥ ೧೬ ॥ ಹಸ್ತನಕ್ಷತ್ರಪ್ರ । ಶಸ್ತೇಂದು
ವಾರ । ಪ್ರಸ್ತುತದತದಿಗೆಸು । ಸ್ವಸ್ತಿದಪಿದಿನಲು ॥ ೧೭ ॥
ಸತಿಯರನು ಕರೆಯಿಸಲು । ಕುತುಕಯುತೆಯಾಗಿ । ಚತುರೆ
ಯರಿಗೊರೆಯುತಿರ । ಲತಿಹರ್ಷದಿಂದ ॥ ೧೮ ॥ ಕೇಸರದೊ
ಳೋಕುಳಿಯ । ನಾಸೆಯಿಂಪಾಡಿ । ಸೂಸಿದರುಜಯಮನು
ಜ । ಕೇಸರಿಯಮೇಲೆ ॥ ೧೯ ॥

ಧಡಮಾಹಾಸಿದಹಾಡು.

ರಾಗ—ಪೂರ್ವಿಕಲ್ಯಾಣಿ. ತ್ರಿಪುಟತಾಳ.

ಸುಕುಮಾರಾಂಗಿಯರೆಲ್ಲ । ಮಕರವಕಟ್ಟಿಸಿ । ವಿಕ
ಸಿತಸುಮದಿಂದಲಂಕರಿಸಿ ॥೧॥ ಸಿಂಗರಿಸಿದಮಂಟಪದೊಳ್ ।
ಬಂಗಾರದಮಣೆಹಾಕಿ । ರಂಗವಲ್ಲಿಗಳ ಬಿಡುತಲೆ ॥ ೨ ॥
ಬಿಳಿಯಡಡಮದಮಧ್ಯ । ದೊಳಂಬರೆದುಜಾವಳದಿಂ ।
ಲಲಿತಾಷ್ಟಪರ್ಣಕಮಲವ ॥ ೩ ॥ ಧಡಮದ ಕೊನೆಗಳ ।
ಪಿಡಿದು ಮುತ್ತೈದೆಯರು । ನಡೆತಂದು ಹಸೆಯಮೇಲೆ
ಹಾಕಿ ॥ ೪ ॥ ಪೊಡತಜಯನರಹರಿಯ । ಗಾಡಿಕಾತಿಯೆ
ದಯ । ಮಾಡಬೇಕೆಂದು ಬೇಡುತ್ತಿರಲು ॥ ೫ ॥

ಹಸೆಗೆ ಕರೆಯುವಹಾಡು.

ರಾಗ—ಕಾಂಭೋಜಿ. ತ್ರಿಪುಟತಾಳ.

ಮುತ್ತಿನಹಸೇಮಣೆ । ಯನ್ನಿಹಾಕುತ್ತ । ಉತ್ತ
ಮರತ್ನದಾ ಸ್ತರಣವಹಾಸಿ । ಕುತ್ತಿನೀವರಗುದಿಂಬನ್ನಿ

ತಂದಿರಿಸಿ | ಚಿತ್ತದಿಸಂತಸ| ವೆತ್ತು ಬಾಬಾರೆಂದು॥ ಮತ್ತ ಕಾ ಶಿಸಿಯು ಕರದರು ॥ ೧ ॥ ಪಚ್ಚ ಕರ್ಪೂರದ ರಂಗವಲ್ಲಿಗಳಿಂ | ಅಚ್ಚರಿಯನಿಹಸೆಯುಬರೆದು ಮುತ್ತುಗಳಿಂ | ಹೆಚ್ಚಾಗಿಸಿಂಗರಿಸಿ ಮಂಗಳಕರಕುಸು | ಮೋಚ್ಚಯಗಳ ಸಿಡುತ | ಉಚ್ಚರಿಸುತಪದವ ॥ ಸಚ್ಚರಿತ್ರೆಯನು ಕರದರು ॥ ೨ ॥ ಉನ್ನತಕನಕದ ಕಂಭಗಳನಿಟ್ಟು | ಮುನ್ನ ದೀಪವಬೆಳಗಿ ಸಂತಸಪಟ್ಟು | ಪನ್ನಗವೇಣಿಗಾ ಭರಣಗಳಂನಿಟ್ಟು | ಸನ್ನುತಗುಣ ಸಂಪನ್ನೆಯ ಬಾರೆಂದು ॥ ಕನ್ನೆಯರು ಹಸೆಗೆ ಕರದರು ॥ ೩ ॥ ಪರಿಮಳಗಂಧಹರಿದ್ರಾಕುಂಕುಮವ | ನಿರುಪಮರಂಭಾದಿ ಫಲಸುಮವರವ | ಇರಿಸುತಲೆಲ್ಲರು ಸರಸಗಾನವಮಾಡಿ | ಕರಿವರಗಾಮಿನಿತರುಣಿಬಾಬಾರೆಂದು॥ ತರಳೆಯನು ಹಸೆಗೆ ಕರೆದರು ॥ ೪ ॥ ಗೌರವಾಗಿಹಪತ್ತಲವನುಡಿಸುತ್ತ | ಹಾರವ ಹಾಕಿ ಕಂಚುಲಿಯನುತೊಡಿಸಿ | ಚಾರುತರದರತ್ನಾ ಭರಣಾವಳಿಯನಿಟ್ಟು | ಶ್ರೀರಮಣಿಯು ಜಯ ನಾರಸಿಂಹನ ಸತಿಯು ॥ ಹೀರದಹಸೆಗೆಕರದರು ॥೫॥

ಚಿಗುಳಿ ಕುಟ್ಟುವಾಗ ಹೇಳುವಹಾಡು.

ರಾಗ—ಪಂತುವರಾಳಿ. ರೂಪಕತಾಳ.

ಸಪ್ತಿಪಾಲನೈಕಶೀಲ | ಸುಪ್ತಿನೀಲಮೋಘಸೀಲ | ಸುಪ್ತಿಬಾಲಗೋಪಾಲ | ಸುವ್ವಾಲೆ ॥ಪ॥ ಘಾರಸತಿಯರೆಲ್ಲರಂದು | ಸೇರುತಾನಂದದಿಂದ | ಚಾರುಮಂಗಳೋತ್ಸವ | ಕ್ಕಾರಭಿಸುತಲಿ ॥ ೧ ॥ ಮಂಗಳವಸ್ತುಗಳತಂದು | ಮುಂಗಡೆಯು

ಲ್ಲಿರಿಸಿ ಮಣೆಯ | ಸಂಗೊಳಿಸುತ ಸಿಂಗರಿಸುತ | ಮಂಗ ಳಾಂಗಿಯರ್ ‖ ೨ ‖ ಅಸಮರೂಪಿ ರುಕ್ಮಿಣಿಯನು|ಹಸೆಯ ಮೇಲೆಕೂಡಿಸುತ್ತ | ಯಸಗುತಾರತಕ್ಷತೆಗಳ | ಬಿಸಜಮು ಖಿಯರು ‖ ೩ ‖ ಮಡದಿಮಣಿಯರ್ಕೈವರು ಮುಂ| ಗಡೆ ಯೊಳ್ಕೈತಂದುನಿಂದು | ಸಡಗರದಿಂದೊನಕೆಯನ್ನು| ಪಿಡಿದು ಪೂಜಿಸಿ ‖ ೪ ‖ ಚಿನ್ನದಹರಿವಾಣದಲ್ಲಿ | ಮುನ್ನಮೆಳ್ಳುಬೆ ಲ್ಲಂಗ |ಳನ್ನುಹಾಕಿಪಿಡಿದುಮುದದಿ |ರನ್ನದೊನೆಕೆಯ ‖೫‖ ಹರಿರಮಾಬ್ರಹ್ಮವಾಯು | ಗರುಡಶೇಷರುದ್ರಜಿಷ್ಣು | ಸುರ ರ ತಾರತಮ್ಯದಿಂ | ಸ್ಮರಿಸಿ ಮನದೊಳು ‖ ೬ ‖ ಚಂದದಿಂ ಶ್ರೀಮದಾ | ನಂದತೀರ್ಥಗುರುಪದಾರ | ವಿಂದಕೆರಗಿಕುಟ್ಟಿ ದರಾ | ನಂದದಿಂದಲಿ ‖ ೭ ‖ ಶರಣುತರಣಿಕಿರಣಶೋಣ | ಚರಣಶರಣಭರಣನಿಪುಣ | ಶರಣುದೇವದೇವ ವರವ | ಕರುಣಿಸೆನುತಲಿ ‖ ೮ ‖ ಚಾರುದೇಹಪಕ್ಷಿವಾಹ | ನೀರ ದಾಂಗದುಷ್ಟ ಭಂಗ | ಧೀರವಾರ ಗೇಯ ವಿಜಯ | ನಾರ ಸಿಂಹನೆ ‖ ೯ ‖

ಇದೂ ಚಿಗುಳಿಕುಟ್ಟುವಕಾಲದಲ್ಲಿ ಹೇಳುವಹಾಡು.

ರಾಗ—ಜುಂಜೋಟಿ. ರೂಪಕತಾಳ.

ಸುವ್ವಿಸುವ್ವಿ ಸುಗುಣಸಾಂದ್ರ ರಾಮಚಂದ್ರ |ಪಲ್ಲ| ಸುವ್ವಿ ವದನವಿಜಿತ ಚಂದ್ರ | ವಂದಿತೇಂದ್ರ |ಅ| ಅವನಿ ತನುಜೆ ನೆರೆಯೆ ಮಹೋ | ತ್ಸವದಿ ಸತಿಯರು | ಜವದಿ ಸೇರುತರ ನೆಲೆಯೊಳು | ತವಕಪಡುತಲಿ ‖ ೧ ‖ ಹಸೆಯ

ಜಗುಲಿಮೇಲೆಹಾಕಿ | ಮಿಸುನಿಪೀಠವ | ಎಸೆಯುವಾಸ್ತರಣ
ವನ್ನು | ಪಸರಿಸಿ ಹಾಕಿ ‖ ೨ ‖ ಸಾಲುಗೊಳಿಸುತಿಟ್ಟು
ದೀಪ | ಜಾಲವನ್ನು | ಮೇಲಹ ಮಂಗಳ ಸುವಸ್ತು |
ಮಾಲೆಯನ್ನೂ | ೩ ‖ ಧಾರುಣೀಬಾಲೆಗಲಂ | ಕಾರವನ್ನು |
ನಾರಿಮಣಿಯರೆಲ್ಲರೆಸಗಿ | ಮಿರಾರಿದವುದದಿಂ ‖ ೪ ‖ ಅಸವಸ
ದಿಂ ಸೀತೆಯಕಾ | ಡಿಸುತಹಸೆಯೊಳು | ಎಸಗುತಾರತಕ್ಷ
ತೆಗಳ | ಬಿಸಜಮುಖಿಯರು ‖ ೫ ‖ ಅಣಿಮುತ್ತು ಬಿಗಿದಿಹ
ಹರಿ | ವಾಣದಲ್ಲಿ | ಮಾಣದೆಹುರಿದೆಳ್ಳಹಾಕಿ ! ಜಾಣೆಯ
ರೆಲ್ಲ ‖ ೬ ‖ ಪುಡಿಯಬೆಲ್ಲವನ್ನುಯಳ್ಳಿ | ನೊಡನೆಹಾಕಿ ‖
ಪಿಡಿದುರತ್ನದೊನಕೆಯನ್ನು | ಸಡಗರದಿಂದ ‖ ೭ ‖ ಹರಿಗೆ
ನಮಿಸಿಗುರುಗಳನ್ನು | ಸ್ಮರಿಸಿಮನದೊಳು | ಸುರರಭಜಿ
ಸುತ್ತೈವರಾ | ಸರಸಿಜಾಕ್ಷಿಯರ್ ‖ ೮ ‖ ಪಾಡುತಿಂಚರದಿ
ಕೊಂ | ಡಾಡುತಹರಿಯು | ಬೇಡುತಸನ್ಮಂಗಳವನು |
ನೀಡೆನುತ್ತಲಿ ‖ ೯ ‖ ಕುಟ್ಟಿದರಾಚಿಗುಳಿಯನ್ನು | ದಿಟ್ಟೆ
ಯರೆಲ್ಲ | ಮುಟ್ಟುಮಿರಾರಿದಾನಂದ | ಪಟ್ಟುನೆಟ್ಟನೆ | ೧೦ ‖ ಶರ
ಣುರಾಮಸುಗುಣಧಾಮ | ಶರಣುಭೂಪ | ಶರಣುಸದಯ
ಹೃದಯವಿಜಯ | ನರಹರಿರೂಪ ‖ ೧೧ ‖

## ಚಿಟ್ಟುಬಡಿದ ಹಾಡು.

ರಾಗ—ಮೋಹನ. ಆದಿತಾಳ.

ಚಿಟ್ಟನ್ನುಬಡಿದ | ಆಟ್ಟಡೆಯಲ್ಲಿ ‖ ಪ ‖ ದಿಟ್ಟೆಯು
ಹರಿಸದರಿ ‖ ಅ ‖ ಲಲನೆಯರಿತ್ತಜಾ | ವಲವನುನಿಜಕರ |

ತಲಕೆಸವರಿಕೊಳು | ತಳಿಗೋಡೆಯೊಳು ॥ ೧ ॥ ಹಾಲು ತುಪ್ಪವಕರ | ನಾಲೀಕಕೆಹಚ್ಚಿ | ಬಾಲೆಯುಭಿತ್ತಿಯ | ಮೇಲಂಗ್ಯೆಯು ॥ ೨ ॥ ನಾರಿಯರೆಸಗಲು | ಚಾರುಗಾನ ವನು | ಭೋರೆನುತಿರವ್ಯೆ | ಯಾರದಿವಾದ್ಯವು ॥ ೩ ॥ ಕುಸುಮದವರ್ಷವ | ನಸವಸದಿಂಸುರ | ವಿಸರವುಕರೆ ಯಲು | ವಸುಧಾನಂದನೆ ॥ ೪ ॥ ಪರಮಾನಂದವ | ಧರಿ ಸುತ ಮನದೊಳು | ಪರಮಪುರುಷಜಯ | ನರಹರಿಯರ ಸಿಯು ॥ ೫ ॥

ಆರತಿ ಯೆತ್ತುವ ಹಾಡು.

ರಾಗ—ರೇಗುಪ್ತಿ. ಆದಿತಾಳ.

ಶೃಂಗಾರಾಂಬುನಿಧಿ | ಪೂರೆಗೆಪರೆಗೆ | ತುಂಗತರಾದ ರೆಗೆ ॥ ಅಂಗಜಜನನಿಗೆ | ಸಂಗತಕರುಣಾ | ಪಾಂಗಗೆಮತ್ತ ಮ | ತಂಗಗಮನೆ ॥ ಮಂಗಳದಾರತಿಯಬೆಳಗಿರೆ ॥ ೧ ॥ ಬಿಳಿಯಪತ್ತಲವ ನುಡುತಲಿತೊಟ್ಟು | ಕಂ | ಚುಲಿಯನು ಹಾರಾ ॥ ವಳಿಯನುಗಳದೊಳು | ತಳೆಯುತ ಬಲ್ಲುಹೊಳ ಹೊಳೆಯುತ್ತಿರುವೀ | ಜಲಜಾಂಬಕಿಗೆ ॥ ಲಲನೆಯರು ॥೨॥ ಮುತ್ತಿನಬಟ್ಟು ಫಾಲದೊಳೆಸೆಯೆ | ಉತ್ತಮಾಭರಣದ ॥ ಪೊತ್ತವತಾಧರಿ | ಸುತ್ತವೀಟಿಯಸವಿ | ಯುತ್ತಹಸೆಯೊ ಳಿಹ|ಮತ್ತಕಾಶಿನಿಗೆ ॥ ಮುತ್ತಿನಾರತಿಯ ॥ ೩ ॥ ಪ್ರೇಮಾ ತಿಶಯದಿ ಪಾಡಲುದೇವ | ಸ್ತೋತ್ರಮವುಸಂತಸದಿಂ ॥ ಪೂ ಮಳೆಗರೆಯಲು | ಕಾಮಿನಿಮಣಿಯರು | ಭೂಮಿಸುತೆಗಾ|

ರಾಮನಸತಿಗೆ ॥ ಹೇಮದಾರತಿಯು ॥ ೪ ॥ ಕರುಣಾಂಭೋ ನಿಧಿಗೆ ಗುಣಸೇವಧಿಗೆ । ವರಮತಿಸನ್ನಿಧಿಗೆ ॥ ಸರಸಿಜನೇತ್ರೆಗೆ । ಸುರನುತಿಪಾತ್ರೆಗೆ । ಪರಮಪುರುಷಜಯ । ನರಹರಿಯರಸಿಗೆ ॥ ಮರಕತದಾರತಿಯು ॥ ೫ ॥

## ಮಡಲುತುಂಬುವ ಹಾಡು.

ರಾಗ—ಶಂಕರಾಭರಣ. ಮಿಶ್ರಛಾಪು.

ಶಾತಕುಂಭಮಂಟಪದೊಳು । ರತ್ನ । ಸ್ಫಾತಫಲಕವನ್ನುಹಾಕಿ । ಭೂಮಿ ॥ ಜಾತೆರಾಮರಸಂ । ಪ್ರೀತಿಯಿಂಕೂಡಿಸೆ । ಧಾತೃಮುಖಾಮರ । ವ್ರಾತವುನಾರದ । ಗೌತಮಮುಖರೆಸೆಯೆಸಭೆಯಲ್ಲಿ ॥ ೧ ॥ ಚೋಳನೇಪಾಳಬಂಗಾಳ। ದೇಶ । ಪಾಲಕರೆಸೆಯಲೊಂದೆಡೆಯೊಳ್ । ವರ ॥ ಶೀಲೆವಾಣಿಫಣಿ । ಪಾಲನಾರೀಗಣ । ಶೈಲೇಂದ್ರತನಯಾ । ಪಾಲೋಮಿಮುಖ । ಲೋಲಾಕ್ಷಿಯರಿರೆ ಸಭೆಯಲ್ಲಿ ॥ ೨ ॥ ಸುರನಾರಿಯರು ನರ್ತಿಸುತಿರೆ । ಪೂ । ಸರಿಯನಮರತತಿಕರೆಯೆ । ಭೋ ॥ ರ್ಗರೆಯಲುಮಂಗಳ । ಕರವಾದ್ಯನಿಕರವು । ಸರಸಗಾನವಸತಿ । ಯರುವಿರಚಿಸಲು । ವರಮಂತ್ರವಹೇಳೆ ಪುರೋಹಿತರು ॥ ೩ ॥ ಹೋಮವಮಾಡಿದಬಳಿಕ । ಸರ್ವ । ತಾಮರಸಾಕ್ಷಿಯರಾಗ । ನವ ॥ ಹೇಮಭಾಜನದೊಳು । ದ್ರಾಮನಾನಾಫಲ । ಸ್ತೋಮವತುಂಬುತ । ವಾಮಲೋಚನೆಯರು । ಹೋಮದಜಗುಲಿಯಮೇಲಿರಿಸಿದರು ॥ ೪ ॥ ಜಂಬೂನಾರಿಕೇಳರಂಭಾ । ಕನಕ । ಜಂಬೀರ

ಖರ್ಜೂರದ್ರಾಕ್ಷಾ । ನಿಕುಂ ॥ ರುಂಬವನಂಬುಜಾಕ್ಷನು । ತುಂಬಿದೊಡನಾ । ಬಿಂಬಾಧರಿಯರು । ಮುಂಬರಿಯುತಲಿ । ಮುಂಬಾಳದೊಳಡುತಕುಂಕುಮವ ॥ ೫ ॥ ಪತಿಹಿತೆಯಾಗಿ ನೀಬಾಳೌ । ಪುತ್ರ। ಶತವನುಪಡೆಯುತ ಕೇಳೌ । ಪೂಜ್ಯ ॥ ತತಿಯುವಾತನುನೀ । ನತಿಶಯದಿಂದಲಿ । ಸತತವೈಭವೋ । ನ್ನತಿಯಪೊಂದೆಂದ । ಕ್ಷತೆಯನ್ನುಹಾಕಿಹರಸುತ್ತ ॥ ೬ ॥ ಕೌಸಲ್ಯಾಮುಖಸರ್ವಸತಿಯು । ವರ್ಣನ । ದಾಸಿಯಿಂದ ನೋಡುತಿರಲು । ನತ ॥ ವಾಸವಜಯನರ । ಕೇಸರಿಯುಸಿ ಯಾದ । ಭೂಸುತೆಸೀತೆಗೆ । ಲೇಸೆಂದುಪರಸುತ । ಲಾಸತಿ ಯರು ಮಡುಲತುಂಬಿದರು ॥ ೭ ॥

ಬಯಕೇಹಾಡು.

ರಾಗ—ಕೇತಾರಗೌಳ. ರೂಪಕತಾಳ.

ಮಾನವೇಂದ್ರನಕಾಂತೆ । ಭೂನಂದನೆತಾನ । ದೇನನು ಬಯಸಿದಳು ॥ ಪ ॥ ಶ್ರೀರಮಣನಪಾದ । ಸಾರಸಕೆರಗುತ । ಧೀರಮಧ್ವಾರ್ಯರಿಗೆ । ಸೂರಿವಂದಿಸುತ । ಭಾರತಿಗೆರಗುತ । ಹೇರಂಬನಭಜಿಸು । ತೀರೀತಿಯೊರೆವೆಂ ॥೧॥ ತಿಂಗಳುತುಂ ಬಲುಕಂಗಳುಗೂಣಿಬೀಳ । ಲಂಗವುಬಡವಾದುದು ॥ ಬಂಗಾರ ಬಣ್ಣವು । ಮಂಗಳಾಂಗಿಯಮೈಯು । ಸಿಂಗರಿಸುತಲಿರ್ದ । ದಂಗನಮೋಹಿಯು ॥ ೨ ॥ ಮಾಸವೆರಡಾಗಲು । ಮಂಚದಿಂ ದಿಳಿಯಳು । ಪೂಸಳು ಗಂಧವನು ॥ ಲೇಸಾದಪಾಯಸಶಾಲ್ಯ ನ್ನಂಗಳ । ವಾಸನೆಯೈತರೆ । ಸೈಸದಂಗನೆಗೆ ॥ ೩ ॥ ಮಂಚೆ

ಯಬಾಳಕಳು । ಮಂಚದಿಂದಿಳಿಯಳು । ದುಂಡುಮಲ್ಲಿಗೆ ಮುಡಿಯಳು । ಖಂಡಶರ್ಕರೆದ್ರಾಕ್ಷಿ । ಪೇಂಡಖರ್ಜೂರವ। ಕಂಡರೆಮೊಗದಿರುಹಿ । ಕೊಂಡು ಕೂಡುವಳು ।೪। ತಿಳಿದು ದು ಬಯಕೆಯು । ನಳಿನದಳಾಕ್ಷಿಗೆ । ಎಳೆಹುಳಿಸಿಹಿಮೆರಪ । ಎಲೆಚಿಹಣ್ಣು ಕಿ । ತ್ತಲೆದಾಳಿಂಬನೇ । ರುಳೆ ಹಣ್ಣುಗಳ ತಾನು । ಬಲುಬಯಸುವಳು ॥ ೫ ॥ ಎಳೆವಿಸಿಲೊಳುತನ್ನ। ಗೆಳತಿಯರೊಡನೆತಂ । ಗುಳನುಣ್ಣಬೇಕೆಂಬಳು । ಪಳು ವಿಂಜದೊಳುಮುನಿ । ಲಲನೆಯರೊಡಗೂಡಿ । ತಳಿರಮಂ ಚದಮೇಲೆ । ಮಲಗಬೇಕೆಂಬಳು ॥ ೬ ॥ ಹೂರಿಗೆಹೊಯ್ಗ ಡುಬಿ । ಣ್ಣೂರಿಗೆ ಚಕ್ಕುಲಿ । ತಾರಪೇಣಿಗಳನ್ನು । ಕಾರ ದಾಂಬೊಡೆಗಳ। ಸೇರಿದ ಗೊಜ್ಜನು। ನಾರಿಮಣಿಯು ಭಾರಿ। ಭಾರಿಗುಬಯಸುವಳ್ ॥ ೭ ॥ ಹೊಸಪತ್ತಲವನುಟ್ಟು । ಹಸುರುಬಣ್ಣದಕು । ಪ್ಪುಸವನ್ನುಬಯಸುವಳು ॥ ಬಿಸಜ ಲೋಚನೆಯಾ।ಯಸಗೊಂಡು ಬಳಲುತ । ಅಸವಸದಿಂದಲಿ। ವಸುಧೆಯೊಳ್ ಮಲಗುವಳು ॥ ೮ ॥ ಮೆರೆವ್ಯೈದುತಿಂಗಳು ತರುಣಿಗೆತುಂಬಲು । ಹರಿಸದಿಂದಬಲೆಯರು । ಪರಿಪರಿಬಳೆ ಗಳ । ಕ್ಕರದೊಳಗಿಡಿಸಲು । ಪರಮಪೂರುಷ ಜಯ । ನರ ಹರಿಯೆರಸಿಯು ॥ ೯ ॥

ಬಯಕೆಯ ಹಾಡು.

ರಾಗ—ಸೌರಾಷ್ಟ್ರ. ಆದಿತಾಳ.

ಸರಸಿಜ ನೇತ್ರನ ಚರಣಕೆ ನಮಿಸುತ । ಗುರುಗಳ ಚರಣಾಂಬುರುಹವ ಭಜಿಸಿ ॥ ತರುಣಿ ರುಕ್ಮಿಣಿ ದೇವಿ ।

ಯುರುತರ ಗರ್ಭವ । ಧರಿಸಲು ಬಯಕೆಯಾ । ಪರಿಯ ಬಣ್ಣಿಪೆ ನಾ । ದರದಿಂದ ಕೇಳಜನರೆಲ್ಲ ೧॥ ವನಿತೆಯು ಬಸುರೊಳು । ವಿನುತಪ್ರದ್ಯುಮ್ನನು । ಜನಿಸುವನೆಂದುಸೂ। ಚನೆಕೊಡಲು । ಅನಘಪೂರ್ಣಫಲ । ಘನರತ್ನಂಗಳ । ವನರುಹನೇತ್ರನು। ತನಗಿತ್ತಂತೆ। ಕನಸನುಕಂಡಾತರುಣಿಗೆ ॥೨॥ ಮಂಗಳದೇವಿಯಾದಾ ರುಕ್ಮಿಣಿಗೆ । ತಿಂಗಳೊಂದು ತುಂಬಲು ಮಿಂದ ದಿನಕೆ । ಕಂಗಳು ಗುಣಿಬೀಳ ಲಂಗವೃಕೃಶವಾಗೆ । ಭೃಂಗಾಳಕಿಗಾ ಕುಳಕೆ ತೂಕಡಿಕೆ । ಸಂಗೊಳಸಿತುಬೇಗ ಲೋಕರಿಕೆ ॥ ೩ ॥ ಬಳಲಿಕೆ ಬಲುನೆಲೆ ಗೊಳುತಿರೆ ಮಂಚದಿಂ । ದಿಳಿಯಳು ಸೇವಿಪ ಕೆಳದಿಯರಂ । ಪಳವಳಂಪಕ್ವಾನ್ನ । ಗಳವಾಸನೆಬರೆ । ಲಲನೆ ಯಸಹ್ಯವೆಂಬಳು ವೋಕರಿಸುತ । ಗಳವ ತಿರುಗಿಸಿ ಮಲಗುವಳು ॥ ೪ ॥ ಎರಡುತಿಂಗಳು ತುಂಬಲು ರುಕ್ಮಿಣಿಗೆ । ಸುರುಚಿರಕನಕಾಭರಣಗಳ । ಭರವಸ್ಯೆರಿಸೆನೆಂ । ದೊರೆಯುತ ತೆಗೆತೆಗೆ । ದಿರಿಸಿ ಬೇಸರವನು । ಧರಿಸುವಳಾಸತಿ । ಸರಸಿಜಶರನ ಬಸುರಲ್ಲಿ ॥ ೫ ॥ ವಾರಿಜ ನೇತ್ರೆಗೆ ಮೂರು ತಿಂಗಳು ತುಂಬೆ । ಶಾರದಶಶಿಯಧಿಕ್ಕರಿಪಂತೆ ವದನವು । ರಾರಾಜಿಸೆ ಬಂಗಾರದಂತೆಸೆಯಲು । ಶಾರೀರದ್ಯುತಿಯಾ ರುಕ್ಮಿಣಿಯಾ । ಧೀರ ಮನ್ಮಥನ ಬಸುರಲ್ಲಿ ॥ ೬ ॥ ಅಂಬುಜನೇತ್ರೆಗೆನಾಲ್ಕನೆ ತಿಂಗಳು । ತುಂಬಲು ಬಯಕೆ ತಿಳಿಯೆ ಹುಳಿವೆರದ । ನಿಂಬೆ ಹುಣಿಸೆ ದಾಳಿಂಬೇ ಕಾಯಿಗೆ । ಸಂಬಾರವನದ್ದಿ ತಿಂಬುವೆನೆನುತಲಿ । ಬಿಂಬಾಧರೆಯಾಗ ಬಯಸುವಳು

॥ ೭ ॥ ಲಲನೆಯು ವದನವುಥಳಥಳಿಸುತ್ತಿರೆ । ಗೆಳತಿಯ ರೊಡನೆ ತಂಗುಳನುಣುತ । ತಿಳಿಗೊಳ ದಡೆಯೊಳು ಕುಳಿತು ಫಲಂಗಳ । ಮೆಲುಬೇಕೆನುತಲಿ ಬಲುಬಯಸು ವಳು । ತಳಿರಮಂಚವನೇ ಬಯಸುವಳು ॥ ೮ ॥ ಒಡ ನೈದು ತಿಂಗಳು ತುಂಬೆರುಕ್ಮಿಣಿಗೆ । ಮಡದಿಯುರುಡಿಸುತ ಪತ್ತಲವ । ಬಿಡದೆ ಪಸುರುಬಳೆಇಡಿಸುತ ಸಂತಸ । ಪಡೆ ಜಯನೃಹರಿಯು । ಮುಡಿಸುತ ಸುಮವ । ಕಡುಸಂತಸ ದೊಳು ಪರಸಿದರು ॥ ೯ ॥

ಬಸುರಿಯನ್ನು ಹಸೆಗೆ ಕರೆದ ಹಾಡು.

ರಾಗ—ಶಂಕರಾಭರಣ. ಮಿಶ್ರಛಾಪು.

ಶ್ರೀಕರಿ ವಾರಾಶಿಜಾತೆ । ಮಾತೆ । ಲೋಕೇಶ ನುತೆ ಪೂತೆನತಪಾರಿಜಾತೆ ॥ ಪಾಕಾರಿಮುಖಮುನಿ । ಲೋಕೈಕ ಪಾಲಿನಿ । ಶೋಕಹಾರಿಣಿ ಬೇಗ । ಲೋಕಜನನಿ ಬೇಗ ॥ ನೀ ಕರುಣದಿ ಹಸೆಗೆ ದಯಮಾಡು ॥ ೧ ॥ ಅಂಗಜಜನನಿ ವಿಮಾಯೆ । ತಾಯೆ । ಸಂಗತಮುನಿಗೇಯೆಶೃಂಗಾರಕಾಯೆ॥ ಭೃಂಗಾಳಕಾಂಚಿತೆ । ಮಂಗಳದೇವತೆ । ರಂಗನಾಥನದಯಿ ತೆ । ತುಂಗಸದ್ಗುಣಯುತೆ ॥ ಬಂಗಾರದಹಸೆಗೆ ದಯಮಾ ಡು ॥ ೨ ॥ ಶಯಬುಗಳಾಂಚಿತಸಾರಸೆ । ಸರಸೆ । ಭಯ ಹರದರಹಾಸೆ ನಯಗುಣವಾಸೆ ॥ ಜಯಲಕ್ಷ್ಮಿಯೆವರಾ । ಭಯಕರೆ ನತಧೀರಾ ! ನ್ವಯ ಪಾಲನರಹರಿ । ದಯಿತೆಯೆ ಸಾರಿ ॥ ದಯಮಾಡು ಹಸೆಗೆ ಮುದದಿಂದ ॥ ೩ ॥

ಮುತ್ತುಗಳನು । ಪೋಣಿಯೊಳಾನುತ ॥ ೩ ॥ ಹಾಕುತ ಮಡುಲೊಳು । ಸ್ವೀಕರಿಸುತ್ತದ । ನೇಕಸುರೀತಿಯೊಳ್ । ಕೋಕಿಲವಾಣಿಗೆ ॥ ೪ ॥ ಮೌನಿವರಾವಳಿ । ಮಾನಿತ ಶ್ರೀಜಯ । ಮಾನುಷಸಿಂಹನ । ಮಾನಿನಿರನ್ನೆಗೆ ॥ ೫ ॥

ಗರ್ಭಿಣಿಗೆ ಆರತಿ ಯೆತ್ತುವ ಹಾಡು;

ರಾಗ—ಸುರಟ. ಆದಿತಾಳ.

ಪೂರ್ಣಗರ್ಭವನ್ನು । ಧರಿಸಿರು । ವರ್ಣವಸಂಭವೆಗೆ ॥ ಸ್ವರ್ಣಸಮಾನ ಸು । ವರ್ಣಯುತಾಂಗಿಗೆ । ಕರ್ಣಾಂತಾಯತ । ಪೂರ್ಣಕೃಪಾಕ್ಷಿಗೆ ॥ ಸ್ವರ್ಣದಾರತಿಯ ಬೆಳಗಿರೆ ॥ ೧ ॥ ಶ್ರೀಕರಸದ್ಗುಣೆಗೆ । ಸಾರಸು । ಧಾಕರಸನ್ನಿಭೆಗೆ ॥ ಲೋಕಜನನಿಗಾ । ಲೋಕಿತಸಜ್ಜನ । ಶೋಕಹಾರಿಕರು । ನಾಕೇಕರೆಗೆ ॥ ಶ್ರೀಕರದಾರತಿಯ ಬೆಳಗಿರೆ ॥ ೨ ॥ ಪೊಸ ಪತ್ತಲವನುಟ್ಟು । ತೊಡುತಲಿ । ಪಸುರು ಕುಪ್ಪುಸವನ್ನು ॥ ಮಿಸುನಿಯೊಡವೆಗಳ । ನಸವಸದಿಂದ ಧ । ರಿಸುತೀ ಹಸೆಯೊಳ । ಗೆಸೆವ ಲಕುಮಿಗೆ ॥ ಮಿಸುನಿಯಾರತಿಯ ॥ ೩ ॥ ಫಾಲದಿಕುಂಬುಮರು । ಕಾಲಿಡೆ । ಲೋಲಕಂಧರೆಯಾಗೆ । ಮೇಲಹ ಮುಕುರ ಕ । ಪೋಲವ್ಯತಿಭರ । ದೇಳಗೆಯಂಬರ । ಜಾಲವ ಮುಸುಕಲು ॥ ನೀಲದಾರತಿಯ ॥ ೪ ॥ ಹರಸುತಲೈದೆಯರು । ಫಣೆಯೊಳ । ಗಿರಿಸುತ ಕುಂಕುಮವ ॥ ತರುಣಿಯರೀಯುತ । ಕರದಿ ವೀಳೆಯವ । ಪರಮಪುರುಷಜಯ । ನರಹರಿಯರಸಿಗೆ ॥ ಮರಕತದಾರತಿಯ ಬೆಳಗಿರೆ ॥ ೫ ॥

## ಹಸಿ ಬಾಣಂತಿಗೆ ಆರತಿ ಯೆತ್ತಿದ್ದು.

ರಾಗ—ಮೋಹನ. ಆದಿತಾಳ.

ವಸುಧಾಧೀಶೇಂದ್ರರಾಮನ ಸತಿಗೆ | ಹಸಿ ಬಾಣಂತಿಯಾ | ಗೆಸೆಯುತ್ತಲಿರುವ ಭೂನಂದನೆಗೆ | ಬಿಸರುಹಲೋಚನೆಗೆ || ವಿಸದೃಶಮಹ ಪೊಸ | ಸಿಸುವಿನೊಡನೆ ಈ | ಹಸೆಮಣೆಯೊಳು ರಂ | ಜಿಸುತಿರುವಳಿಗೆ || ವಿಸುನಿಯಾರತಿಯ ಬೆಳಗಿರೆ || ೧ || ಕಟ್ಟಿದ ಮಂಡೆಕಟ್ಟಿ ಮೆರೆಯೆ | ಇಟ್ಟಿರುತಿಹ ಸಾದಿನ |ಬಟ್ಟು ಚೆಲ್ವಾಗಿ ನೊಸಲೊಳಗೆಸೆಯೆ | ದಟ್ಟಿಯ ನಡುವಿನೊಳು || ಗಟ್ಟಿಯಾಗಿ ಬಿಗಿ | ದುಟ್ಟು ಪತ್ತಲವ | ಪುಟ್ಟಡಿಗಳ ತಾ | ನಿಟ್ಟು ಬಂದವಳಿಗೆ || ದಿಟ್ಟೆಯರಾರತಿಯ ಬೆಳಗಿರೆ || ೨ || ಬಳಲುತ್ತಲಿರಲು | ಲಲಿತಾಂಗಕವು | ತೊಳಲುತಿರಲು ನೇತ್ರವು | ಎಳಲುತ್ತಿರಲು ಸೀರೆಯನೆರಿಯು | ಥಳಥಳಿಸಲು ಮುಖರುಚಿ || ಎಳೆಮಗುವನುತೊಡೆ | ಯೊಳುಮಲಗಿಸಿಕೊಂಡು| ಸುಲಲಿತಪೀಠದಿ | ಕಳಕಳಿಸುವಳಿಗೆ || ಕಲಶದಾರತಿಯ ಬೆಳಗಿರೆ || ೩ || ಶ್ರೀರಮ್ಯಾನನೆಗೆ ನಿಟ್ಟುಸುರೇರೆ | ನಾರಿಯಮುಖಶಶಿಯು | ನಾರೈಯ್ಯಲೆಂದು | ತಾರಾವಾರಂ | ಸಾರಿದವೆಂಬಂತೆ || ಚಾರುಶ್ರಮಜಲ | ಭಾರಕಣಂಗಳು | ತೋರಲು ರಂಜಿಪ | ಧಾರುಣಿ ಸುತೆಗೆ || ಹೀರದಾರತಿಯ || ೪ || ವರಮೌನಿಸತಿಯರೆಲ್ಲರು ನೆರೆದು | ಧರಿಸುತ ಸಂತಸವ | ಕರೆಯಿಸುತ್ತಾಗ | ತರುಣಿಯರನ್ನು| ವಿರಚಿಸಿಮಂಗಳವ ||

ನಿರುಪಮಗಾನವ|ಸರಸದಿಮಾಡುತ | ಪರಮಪುರುಷಜಯ |
ನರಹರಿಯರಸಿಗೆ || ಮರಕತದಾರತಿಯ ಬೆಳಗಿರೆ || ೫ ||

ನಾಮಕರಣ ಕಾಲದಲ್ಲಿ ಬಾಣಂತಿಯನ್ನು ಕರೆವಹಾಡು.

ರಾಗ—ಆರಭಿ. ಆದಿತಾಳ.

ಶ್ರೀಸರೋಜಭವಾದಿಪೂಜಿತೆ | ಭೂಸುತೆ ಬಾರೆಂ
ದು | ಕರದರು ಪ || ಗೌರವಸನವನ್ನುಟ್ಟುನೀಂತೊಟ್ಟು|
ಚಾರುಕಂಚುಲಿಯ | ಹೀರದೊಡೆವೆಯನಿಟ್ಟುಮನವಿಟ್ಟು |
ಸಾರಾನಂದದಿಂ || ಬಾರೆನುತ ಸರ | ಸೀರುಹಾಕ್ಷಿಯ |
ರ್ಸೇರಿ ಗೈವರು | ಚಾರು ಗಾನವ | ನಾರಿಮಣಿ ಸುಕು |
ಮಾರನೊಡನೆ| ಯ್ಯಾರದಿಂದಲಿ|ಹೀರಪೀಠಕೆ | ಶ್ರೀಸರೋ
ಜ ಭವಾದಿಪೂಜಿತೆ ಭೂಸುತೆ| ಬಾರೆಂದು| ಕರೆದರು || ೧ ||
ಎಸೆಯಲು ನೊಸಲೊಳು ನೆರೆಸಾದಿನ ಬಟ್ಟು | ಪೊಸ ಜರ
ತಾರಿಯ ಮೋ | ಲ್ಮಸುಕಿನವಸನವ | ಭರದಿಂದಳವಟ್ಟು|
ಬಿಸಜಾತವಿಲೋಚನೆ || ಅಸಮಮುದವಮಾ | ನಸದೊಳು
ತಳೆಯುತ | ಸಸಿಮೊಗದಸಿ ನೀಂ | ಕುಸುಮವ ಮುಡಿ
ಯುತ | ಲಸವಸದಿಂದಲಿ | ಹಸುಕೂಸಿನೊಡನೆ | ವಸುಧಾ
ನಂದನೆ | ಹಸೆಮಣೆಗೀಗಲೆ || ಶ್ರೀಸರೋಜ || ೨ || ನಯನ
ಯುಗಳ ಪಿಕವೇಣಿ ಕಂಜಪಾಣಿ | ಭಯಹರೆ ಕಲ್ಯಾಣಿ |
ನಯ ಗುಣಗಣಮಣಿ ಫಣಿತಾಭ ವಾಣಿ | ದಯದಿಂ
ಸುಶ್ರೋಣಿ || ಶಯವನು ತೋರುತ | ಭಯಗಳ ನೀಡುತ |
ಜಯಕರೆಸು ಜನಾ | ನ್ವಯ ನುತೆ ಮಾತೆ | ಸುಯಶೋ

ವೈಭವ | ದಯನೆಯೆ ಸದಯೆ | ಜಯನರಸಿಂಹನ | ದಯಿ ತಾಮಣಿಯೆ ‖ ಶ್ರೀ ಸರೋಜ ‖ ೩ ‖

ಬಾಣಂತಿಗೆ ಆರತಿ ಎತ್ತುವ ಹಾಡು.

ರಾಗ—ಪೂರ್ವಿ. ಮಿಶ್ರಛಾಪು.

ಶ್ರೀರಾಮನ ಕಾಂತೆಗೆ ಮುದವೆರಸಿ | ಚಾರುತರಾಭರಣಗಳನು ಧರಿಸಿ | ನಾರಿಮಣಿಯು ಕೊಂಡಾಡುತ ಪಾಡುತ ‖ ಹೀರದಾರತಿಯು ಬೆಳಗಿರೆ ‖ ೧ ‖ ಫಾಲದಿ ಸಾದಿನ ಬಟ್ಟನಿಟ್ಟು | ಮೇಲಾಗಿಹ ಬಿಳಿದುಗುಲವನುಟ್ಟು | ಬಾಲನೊಡನೆ ಕುಳಿತಿಹ ಬಾಣಂತಿಗೆ ‖ ನೀಲದಾರತಿಯು ಬೆಳಗಿರೆ ‖ ೨ ‖ ಬಳಲುತ್ತಿಹ ಬಡನಡುವಿನವಳಿಗೆ | ವಿಲಸಚ್ಛಾರದ ಶಶಿ ಸನ್ಮುಖಿಗೆ | ಬೆಳುಪಾಗಿಹ ಕೆನ್ನೆಗಳುಳ್ಳವಳಿಗೆ ‖ ಕಲಶದಾರತಿಯು ‖ ೩ ‖ ಮತ್ತಕಾಶಿನಿಮಣಿಗುತ್ತಮಗುಣೆಗೆ | ಚಿತ್ತಜವಾರಣಮತ್ತಗಮನೆಗೆ | ಚಿತ್ತಜರೂಪನ ಪೆತ್ತಬಾಣಂತಿಗೆ ‖ ಮುತ್ತಿನಾರತಿಯು ‖ ೪ ‖ ಕತ್ನೆಗೆಕಮಲಜಭವವಂದಿತೆಗೆ ‖ ಕಿನ್ನರಸುರವರ ಮುನಿಸೇವಿತೆಗೆ | ಸನ್ನುತ ಜಯನರಸಿಂಹನಕಾಂತೆಗೆ ‖ ಚಿನ್ನದಾರತಿಯು ಬೆಳಗಿರೆ ‖೫‖

ಬಾಣಂತಿಯು ಕುಯಿಲು ಹೋಗುವಾಗ ಹೇಳುವ ಹಾಡು.

ರಾಗ—ಪೂರ್ವಿಕಲ್ಯಾಣಿ ತ್ರಿಪುಟತಾಳ.

ಶಶಿಮುಖಿಸೀತೆಯು ಪಡೆದಾ | ಕುಶಲವರಿಗೆ ತುಂಬಲು | ದಶರಾತ್ರೆಯೆಂದು | ಕುಶಲದಿಂ ‖ ಕುಶಲಿಯು ವಾಲ್ಮೀಕಿ

ಕೃಪಾ | ವಶನಾಗಿಪೇಳಿದನು | ದಶರಥಕುಲಕೇಶುಭವನ್ನು
॥ ೧ ॥ ಪೊಸಕುಯ್ಯಲುಗುಂಡಿಯತಾ | ನಗವಸದಿಂ ತೋ
ಡಿಸುತ | ಮಿಸುನಿಯಿಟ್ಟಿಗೆಯಿಂ | ದೆಸೆಯುವ | ಎಸೆಯುವ
ಜಗುಲಿಯನೇ ಕ | ಟ್ಟಿಸಿ ಸಿಂಗರಿಸೆ ಯಮಿಪ | ರಸಿಯ
ರು ಕೂಡಿ | ನಸುನಗುತ ॥ ೨ ॥ ಮುನಿ ವನಿತೆಯರನು
ಕರೆದು | ಬೆನಕನ ಪೂಜಿಸಿ | ವನಜಸಂಭವನ | ವನಿತೆಗೆ ॥
ವನಿತೆಗೆರಗುತ ಗಾನ | ವನು ಗೈದು ಕರೆಯು | ಲನುವಾ
ಗಿ ॥೩॥ ಲಲನಾಮಣಿ ಬೆಳಿಯ ಪ | ತ್ತಲವನುಟ್ಟಾಭರಣಾ |
ವಳಿಯಾಂತು ಪಾಣಿ | ತಲದೊಳು ॥ ತಳಿಯುತ ಕರದೊ
ಳು ಬೇವಿನೆ | ಸಲು ಕುಡುಗೋಲ್ಗಳ ಬಂದು | ಲಲನೆ ಪೀ
ಠದೊಳು | ಕುಳಿತಳು ॥ ೪ ॥ ತರಣಿವಂಶಾಧೀಶ | ಪರಮ
ಪೂರುಷರಾಮು | ಚರಣವೇಗತಿಯೆಂ | ದೆರಗುತ್ತ ॥ ಎರಗು
ತ ಪಾಲನು ಕರದೋಳ್ | ಧರಿಸುತರವಿಗರ್ಘ್ಯವ | ತರುಣಿ
ಯಿತ್ತಳಾ | ಪರಿಯಿಂದ ॥ ೫ ॥ ನಿಗಮ ಗೋಚರ ಪಾದ |
ಯುಗ ರಾಮದೇವಗೆ ಬಗೆಯೊಳೆರಗುತ | ಬೊಗಸೆಯೊ
ಳು ॥ ಬೊಗಸೆಯೊಳಾನುತ ಪಾಲನು | ದಿಗಧಿಪತಿಗರ್ಘ್ಯವ
ಸುಗುಣೆಯು ಕೊಡಲು | ಸೊಗವಾಗೆ ॥೬॥ ಲಲನೆಯರ್ಬೇ
ವನು | ಕಲಶದಜಲದೊಳದ್ದಿ | ಕೊಳುತ ಬೆನ್ನೀರ | ತಳಿ
ಯುತ್ತ ॥ ತಳಿಯುತ ಜಯನರಹರಿಯ | ಲಲನಾಮಣಿ ಸೀ
ತೆಗೆ ॥ ಕಲಶದಾರತಿಯ ಬೆಳಗಿದರು ॥ ೭ ॥

## ಬಜಿಬೆಣ್ಣೆ ಇಟ್ಟ ಹಾಡು.

ರಾಗ—ಶಂಕರಾಭರಣ. ಆದಿತಾಳ.

ಬಾಲಗೋಪಾಲಗೂಡಿದರು ಬಜಿಬೆಣ್ಣೆಯ ‖ ಪ ‖ ಲೀಲಾಮಾನುಷರೂಪ । ತ್ರೈಲೋಕ್ಯಪಾಲ ಬಾಲ ‖ ಗೋಪಾಲಗೂಡಿದರು ಬಜಿಬೆಣ್ಣೆಯ ‖ ಅ ‖ ಶ್ರೀವಿದಿಳೆಯ ಭಾರವನಿಳುಹೆ । ವಸು । ದೇವಭೂಮೀಶನ ಸತಿಯಾದ । ಈ। ದೇವಕಿಯುದರದೊಳವತರಿಸಿದ ಬಾಲ ‖ ಗೋಪಾಲ ‖ ೧ ‖ ಹರಿಯವತರಿಸಿದಿರವನರಿತು । ಸುರ । ರರಳ ಸರಿಯ ಸುರಿಯುತ ನರ್ತಿಸೆ । ಮುನಿ । ವರರೆಲ್ಲ ಕರವೆತ್ತಿ ಜಯಜಯವೆನೆ ‖ ಬಾಲಗೋ ‖ ೨ ‖ ತರಳನೊಗೆದ ಸು ಮಹೋತ್ಸವವ । ಬಂದು । ನಿರುಕಿಸಿರೆಂದೊರೆಯುತ ಕರೆದು । ಬಂದ। ತರುಣಿಯರನ್ನು ಮನ್ನಿಸುತಲಿ ‖ ಬಾಲಗೊ ‖ ೩ ‖ ವನಿತೆಯರ್ಗೋಪಾಲ ಕಾಂತೆಯರ । ಮನೆ । ಮನೆಗಳಿಗೈದುತ ಪೊಸಬೆಣ್ಣೆಯ । ನೆಮ್ಮ । ತನುಜಾತಗೀವುದೆಂದು ಕೇಳಿ ತಂದು ಬಾಲ ‖ ಗೋಪಾಲ ‖ ೪ ‖ ನವನೀತದೊಳು ಬಜಿಯನು ತೇದು । ಪೊಸ । ಕವಡೆ ಬಜಿಗಳ ಪಾಣಿಗೆ ಕಟ್ಟಿ । ಮಹೋ । ತ್ಸವದಿಂದ ಪಾಡುತ ಪೊಗಳುತಲಾ ಬಾಲ ‖ ಗೋಪಾಲ ‖ ೫ ‖ ಜಗದುದಯಾದಿಕಾರಣನೆಂದು । ಸರ್ವ । ನಿಗಮವು ಪೊಗಳುತಿರುವ ಹರಿಗೆ । ಆ । ಮುಗುದೆಯ ಮಿರ್ಗಿಲಾನಂದದಿಂದ ಬಾಲ ‖ ಗೋಪಾಲ ‖ ೬ ‖ ನಿರುಪಮತರ ಮಂಗಳವಾದ್ಯ।

ಧ್ವನಿ । ಸುರಲೋಕಾದಿಗಳೊಳು ಘುಮ್ಮೆಂದಲು । ಶ್ರೀ । ಪರಮಪುರುಷ ಜಯ ನರಸಿಂಹನಹ ಬಾಲ ಗೋಪಾಲ ೭॥

ರಾಗ—ಶಂಕರಾಭರಣ. ಆದಿತಾಳ.

ಬಜೆ ಬೆಣ್ಣೆಯಿಟ್ಟರಂ । ಅಬ್ಜನೇತ್ರಗೆ ॥ ಪೋಸ ॥ ಪ ॥ ದ್ವಿಜರಾಜವದನೆಯರ್ । ತ್ರಿಜಗತ್ಪಾಲಕಗೆ ॥ ಅನು ॥ ಧಾರುಣಿಯ ಭಾರಾಪ । ಹಾರವ ಮಾಡಲವ । ತಾರವೆಸಗಿದಾ । ಶ್ರೀರಾಮಚಂದ್ರಗೆ ॥ ೧ ॥ ಕೌಸಲ್ಯೆಯೊಳು ಪುಟ್ಟಿ । ದಾಸೂನುವನು ನೋಡೆ । ಭೂಸುರಕಾಂತೆಯು । ರಾಸಮಯದಿ ಬಂದು ॥ ೨ ॥ ಆದರದಿಂದ ಮು । ತ್ತೈದೆಯರ್ಮನೆ ಮನೆ । ವೈದಿಕರೆದು ಜಗ । ದಾದಿಕಾರಣಗೆ ॥ ೩ ॥ ನವನೀತದೊಳು ಬಜೆಯು । ತವಕದಿಂ ತೇದು ಪೋಸ । ಕವಡೆಯು ಕಟ್ಟಿ ಕರದೋಳ್ । ಯುವತೀಮಣಿಯರೆಲ್ಲ ॥೪॥ ದೀನಜನಾಮರ । ಧೇನುವಾಗಿರುವಗೆ । ದಾನವಾಂತಕ ಜಯ । ಮಾನುಷಸಿಂಹಗೆ ॥ ೫ ॥

———

## ಕೋಲಾಟದ ಹಾಡುಗಳು.

### ಬಸವನೆ ಮುಖಕ್ಕೆ ನೀರು ತರುವದಕ್ಕೆ ಹೋಗುವ ಕಾಲದಲ್ಲಿ ಹೇಳತಕ್ಕ ಹಾಡು.

ರಾಗ—ನವರೋಜು. ಆದಿತಾಳ.

ಕೋಲು ಪಟ್ಟಾಭಿರಾಮ । ಕೋಲು ಸದ್ಗುಣಧಾಮ । ಕೋಲು ಶ್ರೀರಂಗ । ಕೋಮಲಾಂಗ ॥ ಪಲ್ಲ ॥ ಅಸುರ ಹಿಂಸೆಯು ಸೈ । ರಿಸದೆ ಸುರರು ವಿಧಿಯೊಳ್ । ಬಸವಳಿ ದುದೂರ । ಲಸವಸದಿಂ ॥ ಬಿಸಜ ಸಂಭವನನಮರ । ವಿಸರ

ದೊಡನಬ್ಧಿಸ । ರಿಸಕ್ಕೈದಿ ನುತಿಯ । ನೆಸಗಲು ॥ ೧ ॥
ಶಶಿಸನು ಸನ್ಮಾಂಚ । ದಶರಥಸತಿಯೊಳು । ಶಿಶುವಾಗಿ ಜ
ನಿಸಿ ತಾಟಕಾದಿ ॥ ಪಿಶಿತಾಶನರ ಕೊಂದು । ಕುಶಿಕಾತ್ಮಜ
ಮುಖವ । ಕುಶಲದಿಂ ಪೊರೆದ ದೇವದೇವ ॥ ೨ ॥ ಪುರ
ವೈರಿ ಚಾಪವ । ಮುರಿದು ಜಾನಕಿಯನು । ವರಿಸುತ
ಯೋಧ್ಯಾಪುರಕ್ಕೈದಿ ॥ ಇರುತಿರೆ ಕೈಕೇಯಿ । ಯೊರೆದ
ಮಾತಿಗೆ ಪಿತನು । ತೆರಳೆನೆ ವನಕೆ । ಪೊರಮಟ್ಟು ॥ ೩ ॥
ಪೂತನು ಕಾಂತನು । ಜಾತರೊಡನೆ ವನದೊಳ್ । ತಾ
ತಿರುಗುತಿರಲ್ । ಸೀತಾಕೃತಿಯ ॥ ಖ್ಯಾತರಾವಣನೆಂಬ ।
ದೈತೇಯನಾವನ । ಕೈತಂದಪಹರಿಸಿ । ತಾ ತೆರಳಲು ॥೪॥
ವನದೊಳು ವಾಲಿಯ । ಹನನವೆಸಗಿ ತಿಳಿದು । ಹನುಂತ
ನಿಂದಾ । ವನಿತಾಸ್ಥಿತಿಯ ॥ ವನಧಿಯ ಬಂಧಿಸಿ । ದನುಜನ
ಕೊಂದು ಸೀತೆ । ಯನು ತಂದ ವಿಜಯ । ಮನುಜಸಿಂಹ ॥

ಗಂಗಾಪೂಜೆಯನ್ನು ಮಾಡಿ ಪ್ರಾರ್ಥಿಸುವ ಹಾಡು.

ರಾಗ—ಹಿಂದುಸ್ತಾನಿ ಕಾಪಿ. ಆದಿತಾಳ.

ಪರಿ । ಪಾಲಿಸು ಶ್ರೀದೇವಗಂಗೆ । ಲೋಲಭಂಗೆ । ಕೃಪಾ
ಪಾಂಗೆ ॥ ಪಲ್ಲ ॥ ಮಾರವೈರಿ ಶಿರೋಭೂಷಿತೆ । ಶೌರಿ
ಪಾದಜಾತೆ । ವಾರಿತ ದುಷ್ಕೃತ ಜಾತೆ ॥ ೧ ॥ ಭಾಗ
ಧೇಯ ಲಭ್ಯಸ್ಪರ್ಶನೆ । ಭೋಗದಾತ್ಮದರ್ಶನೆ ॥ ಸಾಗರಸಂಗ
ತೆ ನೀನೆ ॥ ೨ ॥ ದೇವವಂದ್ಯ ದಯಾಶಾಲಿನಿ । ಪಾವನ
ವಾಹಿನಿ । ಸೇವಕಾಭೀಪ್ಸಿತದಾಯಿನಿ ॥ ೩ ॥

## ಗಂಗೆಯನ್ನು ತರುವ ಕಾಲದಲ್ಲಿ ಹೇಳತಕ್ಕ ಹಾಡು.

ರಾಗ—ನವರೋಜು. ಆದಿತಾಳ.

ಕೋಲು ಕೋರುಣ್ಯಸಾಂದ್ರ । ಕೋಲು ಮುಖ ಜಿತ ಚಂದ್ರ । ಕೋಲು ಶ್ರೀಕರ ಮಾ । ಲೋಲರಾಮ ॥ಪ॥ ಮಲಿನಾತ್ಮಜನಗಳ । ತೊಳೆಯಲು ಗಂಗೆ ಯಾ । ಕಲ ಶದ ಜಲದೊಳ್ । ತುಳುಂಕುವಳು ॥ ೧ ॥ ಬಾವಿಯ ಜಲದೊಳು । ತೀವಿ ಬಂದಳು ಜಗಕೆ । ಪಾವನೆ ಯಾ ಗೋ । ದಾವರಿಯು ॥ ೨ ॥ ಭಾವುಕಂಗಳನಿತ್ತು । ಪಾವನೆ ಪೊರವಳು । ಭೂವಲಯವನೀ । ಕಾವೇರಿಯು । ॥ ೩ ॥ ಸಂಗತಜನರಿಗೆ । ಮಂಗಳವನು ಕೊಡೆ । ಪೊಂಗಿ ಬರುವಳೀ । ತುಂಗಭದ್ರೆ ॥ ೪ ॥ ಧರ್ಮಾತ್ಮ ಕರಿಗೆ । ಶರ್ಮವ ನೀಯಲೀ । ನರ್ಮದೆ ಬಹಳು । ಪೇರ್ಮೆಯಿಂದ ॥ ೫ ॥ ವಿಪುಲಾತಲವ ಬಲು । ಸುಪ ವಿತ್ರವೆಸಗಲು । ಕೃಪೆಯಿಂದ ಬಹಳೀ । ಕಪಿಲಾನದಿ ಯು ॥ ೬ ॥ ಕೃಷ್ಣತನೂದ್ಭೂತೆ ॥ ಜಿಷ್ಣುಸಮರ್ಚಿತೆ । ವೈಷ್ಣವಿ ಬಹಳೀ । ಕೃಷ್ಣವೇಣಿ ॥ ೭ ॥ ಸ್ತೋತ್ರ ಗೈವರನು ಪ । ವಿತ್ರರ ಮಾಡಲು । ಧಾತ್ರಿಗೈದಿದ ಳೀ । ನೇ ತ್ರಾವತಿ ॥ ೮ ॥ ಕೆರೆಯ ನೀರೊಳು ನೆಲಸಿ । ಬರುವಳು ಜಯ ನರ । ಹರಿಪಾದಜಾತೆ । ಪರೀ ಪೂತೆ ॥ ೯ ॥

## ಬಸವನನ್ನು ಪ್ರಾರ್ಥಿಸುವಹಾಡು.

ರಾಗ—ಖರಹರಪ್ರಿಯ(ಹಿಂದುಸ್ಥಾನಿ) ಆದಿತಾಳ.

ಪರಿಪಾಲಿಸುವರ ವೃಷಭೇಂದ್ರ ॥ ಪಲ್ಲ ॥ ಪ್ರಮಥ ಗಣೇಶ್ವರ । ಕುಮತಿ ವಿದಾರ । ಶಮನ ದಮನವಾಹ । ವಿಮಲಗುಣನಿವಹ ॥ ೧ ॥ ಪಾಡಿ ಪೊಗಳುವೆವು । ಮಾಡಿದಯುವನೀಂ । ಬೇಡಿದವರಗಳ । ನೀಡುತ ಸತತವು ॥ ೨ ॥ ಮೋದದೊಳೆಮ್ಮಯ । ತ್ರೈದೆ ತನಕೆ ಸ್ಥಿರ । ವಾದವರವ ಕೊಡು । ತಾದರದಿಂದ ॥ ೩ ॥ ಪತಿಪೂಜೆಯ ಸಂ । ತತದೊಳು ಮಾಡುವ । ಮತಿ ಮೊದಲಾಗಿಹ । ಸುತಧನಗಳ ಕೊಡು ॥ ೪ ॥ ಜಯನರಸಿಂಹನು । ದಯೆಮಾಡುವವೊಲ್ । ಸುಯಸ್ವರಪರಾ । ಭಯಗಳ ನೀಯುತ ॥ ೫ ॥

## ಬಸವನ ಮುಂದೆ ಕೋಲು ಹಾಕತಕ್ಕ ಕಾಲದಲ್ಲಿ ಹೇಳುವ ಹಾಡು.

ರಾಗ—ಶಂಕರಾಭರಣ. ಆದಿತಾಳ.

ಕೋಲುಕೋಲೆನ್ನಿ ಕೋಲೆ । ಚಿನ್ನದ । ಕೋಲುಕೋಲೆನ್ನಿ ಕೋಲೆ । ಕೋಲನಾಡುವ ಬನ್ನಿ । ಬಾಲೆಯರೆಲ್ಲರು । ಮೇಲಹಿ ಸಂತಸದಿಂ ॥ ಪ ॥ ಜರಿಯ ಸೀರೆಯ ನುಟ್ಟು । ತೊಡುತಲಿ । ಮಿರುಗಿನ ಕುಪ್ಪುಸವ । ನಿರುಪಮಭೂಷಣ । ವರಗಳ ಧರಿಸುತ । ಪರಮಾನಂದದೊಳು ॥ ೧ ॥ ಮಿಸುನಿಯ ಮಂಟಪದೊಳ್ । ಕೂಡಿಸಿ । ಬಸವನ ಬಾಲೆಯರು । ಕುಸುಮಗಳಿಂ ಪೂ । ಜಿಸುತಲಿ ಬಲವಂ । ದೆಸಗುತ ನಮನವನು ॥ ೨ ॥ ಕೂಡುತಲೊಂದೆಡೆಯೊ । ಳಾಟವ । ನಾ

ಡುತ ಬಾಲೆಯರು | ಪಾಡುತ ಗುಣಗಳ | ಬೇಡುತೆ ಬಸ
ವನ | ಹಾಡನು ಹೇಳುತಲಿ ॥ ೩ ॥ ಗರುಕೆಗಳನುತಂದು |
ಬಸವನ | ಸರಿಸದೊಳಿರಿಸುತ್ತ | ಪರಿಮಳ ವಾರಿಯ |
ಮೆರೆವ ಬಟ್ಟಲೊಳ | ಗಿರಿಸಿ ಕರವ ಮುಗಿದು ॥ ೪ ॥
ಅರಿಸಿನ ಕುಂಕುಮವ | ಪೂಜಿಸಿ | ತರಳೆಯರೆಲ್ಲ ಜಯ |
ನರಹರಿಕರುಣವು | ಸ್ಥಿರವಾಗಿರುವಂತೆ | ವರಗಳ ಬೇಡಿರೆ ॥

ಕೋಲಾಟದ ಹಾಡುಗಳು.

ರಾಗ—ಶಂಕರಾಭರಣ. ಆದಿತಾಳ.

ಕೋಲನಾಡೋಣ ಬನ್ನಿ | ಬಾಲೆಯರೆಲ್ಲ | ಮೇ
ಲಾಗಿ ಪಾಡುತ ಗೋ | ಪಾಲಕೃಷ್ಣನ ॥ ಪ ॥ ಜರತಾರಿ
ಸೀರೆಯನುಟ್ಟು | ಮಿರುಗಿನ ಕುಪ್ಪಸ ತೊಟ್ಟು | ವರಭೂ
ಷಣಂಗಳನಿಟ್ಟು | ಹರಿಸವಪಟ್ಟು ॥ ೧ ॥ ನೀಲಹೀರಕಾರಾ
ಸುಪ್ರ | ವಾಳಪದ್ಮರಾಗಂಗಳ | ಕೋಲುಗಳಪಿಡಿದುನಲಿದು |
ಬಾಲೆಯರೆಲ್ಲ ॥ ೨ ॥ ಆ ಮಾ ಕಾಂತನನ್ನು ನಮ್ಮ |
ರಾಮದೊಳು ಪೂಜಿಸುತ್ತ | ಪ್ರೇಮವಾಂತು ಮಾನಸದಿ |
ವಾಮಾಕ್ಷಿಯರೆಲ್ಲ ॥ ೩ ॥ ಸರಿಗಿ ವಂಕಿ ಪೈಜಣ ಪಾಡಗ |
ತಿರುಪಿನ ಹೂಹಿಂಬಳೆನಾಗರಗಳ|ಧರಿಸುತನಸುನಗೆತಬಾರೆ
ದೇಶಸ್ಥರ ಹುಡುಗಿ ॥ ೪ ॥ ಸರಪಳಿ ವಜ್ರದ ವಾಲೆ ಜಿಮು
ಕಿ ಚಂ | ದಿರಮುರು ಸರಿಗೆಗಳನು ಧರಿಸುತ್ತಲಿ | ತಿರು
ಚೂರ್ಣವಿಟ್ಟುರಾಮಾನು | ಜರ ಹುಡುಗಿಯರೆಲ್ಲ ॥ ೫ ॥
ಸ್ವರ್ಣದ ವಾಲೇ ಸರ ಹೊನ್ನೂಗಳ | ಕರ್ಣದೊಳಾಂತು
ಗುಂಡಿನ ಸರಗಳ | ತೂರ್ಣದಿಂದ ತಳೆದುಬಾರೆ | ಕರ್ನಾ

ಟರ ಹುಡುಗಿ ॥ ೬ ॥ ಸಾರಾನಂದದಿಂದಲೆಲ್ಲ | ಚಾರುಗಾನ
ವ ಮಾಡುತ | ಮೀರಿಪಾಡುತಲಿ ಜಯ | ನಾರಸಿಂಹನ ೭॥

ರಾಗ—ಸೌರಾಷ್ಟ್ರ. ಏಕತಾಳ.

ಪಾಡಿ ಪೊಗಳುತ | ಕೋಲ | ನಾಡೆ ಬನ್ನಿರೆ |
ಕೊಡುತಾನಂದವನ್ನು | ಗಾಡಿಯಿಂದಲಿ ॥ಪ॥ ದಾನವೇಂದ್ರನ |
ಕೊಂದ | ನೂನವೇದವ | ಸೂನು ವಾದ ಬೊಮ್ಮ ಗಿತ್ತ |
ಮೀನರೂಪಿಯ ॥ ೧ ॥ ಅಮರ ನುತಿಯನು | ಕೇಳ |
ತಮಿತಗಿರಿಯನು | ಮಮತೆಯೊಳು ಧ್ಧರಿಸಿ ದಾದಿ | ಕಮಠ
ರೂಪಿಯ ॥ ೨ ॥ ಈಪಸುಮತಿಯ | ಕದ್ದ | ದೇವಶತ್ರುವ
ಕೊಂದು | ಭೂವಲಯವನೆತ್ತಿದಲೀ | ಲಾವರಾಹನ ॥ ೩ ॥
ನೆಲವ ಬೇಡುತ | ಪಾದ | ತಲದೆ ಬಲಿಯ ಭೂ | ತಲಕೆ
ತುಳಿದ ವಾಮನಾಖ್ಯ | ಜಲಜನೇತ್ರನ ॥ ೪ ॥ ದುರುಳನು
ರವನು | ಸೀಳಿ | ಕರುಳ ಮಾಲೆಯ ಧರಿಸಿ | ಪರಮಭಕ
ರನ್ನು ಪೊರೆದ | ನರಮೃಗೇಂದ್ರನ ॥ ೫ ॥ ಧರಿಸಿ ಕೊಡೆ
ಲಿಯ | ತಾಯ | ನರಿದು ಮೆರೆದನಾ | ನರಪತಿ ಕಾನನ
ಕುಠಾರ | ಪರಶುರಾಮನ ॥ ೬ ॥ ಭೂಭರಾಳಿಯ | ನ್ನಿ
ಳುಹಿ | ವೈಭವಾಳಿಯಿಂ | ಶೋಭಿಸುತ್ತಲಿರ್ಪ | ಟ್ಟಾಭಿ
ರಾಮನ ॥ ೭ ॥ ಬಾಲನಾಗಿ ತಾಂ | ತೋರಿ | ಲೀಲೆಯನ್ನು
ದೈ | ತ್ಯಾಳಿಯನ್ನು ಕೊಂದ ಗೋ | ಪಾಲಕೃಷ್ಣನ ॥
೮ ॥ ಸಿದ್ಧನಿಗಮದಾ | ಪೂರ್ವ | ಪದ್ಧತಿಗೆಡಿಸೆ ॥ ಬದ್ಧ
ಚಿತ್ತನಾಗಿ ಮೆರೆದ | ಬುದ್ಧರೂಪಿಯ ॥ ೯ ॥ ವಾರುವ
ನೇರಿಕ | ಲ್ಕ್ಯವ | ತಾರ ವೆಸಗುತಾ | ಕ್ರೂರರನ್ನು ಕೊಂದ
ವಿಜಯ | ನಾರಸಿಂಹನಾ ॥ ೧೦ ॥

## ಪ್ರಶ್ನೋತ್ತರರೀತಿಯಾದ ಹಾಡು.

ರಾಗ—ಸೌರಾಷ್ಟ್ರ. ಮಿಶ್ರಛಾಪು.

ಕೋಲನಾಡುವ ಬನ್ನಿ | ಬಾಲೆಯರೆಲ್ಲರು | ಮೇಲ
ಹ ಸಂತೋಷದಿಂ | ಲೀಲಾಮಾನುಷರೂಪ | ಮಾಲೋಲ
ಬಾಲಗೋ | ಪಾಲನ ಪೊಗಳುತಲಿ ‖ ಪ ‖

ಗೌರೀಪುತ್ರನ ಪತ್ರ | ವಾರವ ತಿಂಬುದನಾ | ಹಾರಗೊಳ್ಳು
ವನಣ್ಣನ ‖ ವೈರಿ ರಕ್ಷಿಪನು ಕು | ಮಾರನಾಗಿರು
ವನ | ವೈರಿಯ ಸೂತನಾರೆ ‖ ೧ ‖

ಲೋಕೇಶಭವಮುಖ | ಪಾಕಶಾಸನದೇವ | ಲೋಕವಂದಿ
ತ ಪಾದ ‖ ಕೋಕನದದ್ವಯ | ಶ್ರೀಕರಪರಸುಗು |
ಣಾಕರ ಕೃಷ್ಣಕಾಣೆ ‖ ೨ ‖

ಮೃಡನಲ್ಲ ವೃಷವ ನೇ | ರ್ದೊಡು ಬಿದಿಯಲ್ಲ ನಾ | ಲ್ಗಡೆ
ಯೊಳುಮೊಗವಿದ್ದರೂ ‖ ನಡೆಯದೆತಾನನ್ಯ | ರಡಿ
ಯಿಂದೆ ನಡೆವುದು | ಪೊಡವಿಯೊಳಾವುದಿದು ‖ ೩ ‖

ಏಣಾಂಕಮುಖಿಚಾರು | ವೇಣಿಪಲ್ಲವಪಾಣಿ | ಘೋಣಿತ ಸದೃ
ಶವಾಣಿ ‖ ಕ್ಷೋಣಿಯಜನರೆಲ್ಲ|ಜಾಣೆ ನೀಪೇಳ್ದುದ|
ಗೋಣಿಯೆಂಬರು ಸಖಿಯೇ ‖ ೪ ‖

ಗಗನಕಡರ್ವುದು | ಖಗವಲ್ಲ ಕೊಂಬು ಬಾ | ಲಗ ಳಿರೆ
ಮೃಗವಲ್ಲವು | ಮಿಗೆ ಸೂತ್ರಯುತವುಭೂ | ಮಿಗೆ
ಸುರನಲ್ಲವೀ | ಬಗೆಯ ವಸ್ತುವದಾವುದೆ ‖ ೫ ‖

ಪಟುಬಾಲರುಮಾರ್ಗ | ತಟದೊಳಗಾಡಿಸಿ | ಚಟುಲಾನಂದ

ವ ಪೊಂದುವಾ | ಪಟವಲ್ಲವೇನೆಲೆ | ಕುಟಿಲ ಕುಂತಲ
ಜಾಲೆ | ಸಟೆಯೊ ದಿಟವೊ ಹೇಳೆ ॥ ೬ ॥

ಕರಯುಗವಿದ್ದರು | ಚರಣಗಳಿಲ್ಲವು ! ಶಿರವಿಲ್ಲದಂಗವಾಂತು|
ನೆರೆವೈಯೊಳು ಸಾ | ಸಿರತಣುತನಾನುತ | ಪುರು
ಷರನುಂಗುವದು ॥ ೭ ॥

ಮಂಗಳಾಂಗಿಯೆ ಗಜ | ಪುಂಗವ ಗಾಮಿನಿ | ಭೃಂಗಚಿಕುರೆ
ಚದುರೆ | ಅಂಗನೆ ಲೋಲಾ | ಪಾಂಗಿ ನೀನೆಂದುದ|
ನಂಗಿ ಯೆಂಬರು ಜನರು ॥ ೮ ॥

ಧರಿಸಿದ್ದರು ಚಕ್ರ | ವರವನ್ನು ರಥವಲ್ಲ | ಕರಿದು ನೇರಿಳೆ
ಯಲ್ಲವು | ಪಿರಿದು ಪೊನ್ನಿಗೆ ಕೊಂ | ಡರುತಿಂಬು
ದಲ್ಲವಿ | ದರ ಹೆಸರೇನು ಹೇಳೆ ॥ ೯ ॥

ಮೂಲೋಕದಿ ಗೈವ | ಮೇಲಹ ಪೂಜೆಯು | ತಾಳುವ
ಕರುಣಾಲ | ವಾಲಜಯನರಹರಿ | ಲೀಲೆಯಿಂ ವಸಿ
ಸುವ | ಸಾಲಿಗ್ರಾಮವು ಜಾಣೆ ॥ ೧೦ ॥

ತಲೆಯೊಳು ಬೆಂಕಿಯು | ಜಲವನ್ನು ಹೊಟ್ಟೆಯೊ | ಳ್ತ
ಳಿದು ಗರ್ಜಿಸುತಿಹುದು | ಸಲೆ ಜೀವಿಯಲ್ಲವೆ |
ಎಲೆಗಳತಿಂಬುದು | ಲಲನೆ ವಸ್ತುವಿದಾವುದು ॥೧೧॥

ಉಡುಪತಿಮುಖಿ ಕೇಳು | ಕಡು ಸಂತಸವತಾಳು | ಜಡ
ಜಾಯತಾಕ್ಷಿ ಸಖಿ | ಮಡದಿ ನೀ ಪೇಳ್ವುದ | ಪೊ
ಡವಿಯಜನರೆಲ್ಲ | ಗುಡುಗುಡಿಯನ್ನುವರು ೧೨॥

ಮೂರು ಕಣ್ಣಿದ್ದರು | ಮುರಾರಿಯಲ್ಲವು ! ನೀರನೊಳ್
ಕೊಂಡಿದ್ದರೂ | ವಾರಿದವಲ್ಲವು | ಭೂರುಹದೊಳಗಿ

ದ್ದ | ನಾರಿ ಪೇಳ್ವಪಕ್ಷಿಯಲ್ಲ " ೧೩ ||
ಭೃಂಗಾಳಕಿಯೆ ಮ | ತಂಗಜಗಾಮಿನಿ | ಮಂಗಳಾಂಗಿ
ಯೆ ಸಖಿಯೆ | ಅಂಗನಾಮಣಿ ನೀನು | ತುಂಗ
ಮೆಂದೆರೆದುದು | ತೆಂಗಿನಕಾಯಲ್ಲವೆ || ೧೪ ||
ತರಣಿ ಸೋಮರಹಾಗೆ | ಮೆರೆವುದದರ ಪೆಸ | ರೊರೆವರಕ್ಕ
ರಮೂರರಿಂ || ಪರಿಣಯಾದಿಗಳೊಳು | ನರರು
ಮಾಡುವ ರೀ | ಪರಿಯುವಸ್ತು ವದಾವುದು ||೧೫||
ಸರ್ಪವೇಣಿಯೆ ಪೇಳ | ಲಾರ್ಪಳವಳೆನುತ | ದರ್ಪದಿ
ಹೇಳಿದೆಯು | ಪೇರ್ಪರಿಣಯುವ ಸಂ | ತರ್ಪಣೆ
ಯೊಳು ಗೈವ | ಪರ್ಪಟವಲ್ಲವೇನೆ || ೧೬ ||

ಹರಕೆ ಹಾಡು.

ರಾಗ—ಕೇತಾರಗೌಳ. ಆದಿತಾಳ.

ಬಾಳುಬಾಳಣ್ಣಯ್ಯ | ಮೇಲಸವೈಭವ | ದೇಳಿಗೆ
ಯನುಪೊಂದಿನೀನು || ಪ || ಪ್ರೇಮದೆಸತಿಸೂನು |
ಸ್ತೋಮವ ಪೊಂದಿಸು | ಕ್ಷೇಮಶಾಲಿಯುನೀನಾಗಿ || ಭೂ
ಮಿಜಾಸುರರಿಗೆ | ಕಾಮಿತವೀಯುತು | ಧ್ಯಾಮನಾಗಿ ಚಿರ
ಕಾಲಂ || ೧ || ಸರಸನೀನಕ್ಕತಂಗಿ | ಯರಹರಿಸಲೆಕರ |
ತರಿಸುತ ತೌರುಗಾಣಿಸುತಲಿ || ಗುರು ಜನಗಳ ಪಾದ |
ಸರಸಿಜಸೇವೆಯು | ನಿರತವು ಮಾಡುತ ಹರ್ಷದಿಂ || ೨ ||
ದೀನರ ಪೊರೆಯುತ | ಮಾನಿತನಾಗಿ ಸು | ಜ್ಞಾನಿಯೆನಿಸಿ
ಕೊಂಡುನೀನು || ಆನತಜಸಕಾಮ | ಧೇನುವಾಗಿಹಜಯ |
ಮಾನುಷಸಿಂಹನ ಸ್ಮರಿಸುತ || ೩ ||

## ಬೊಂಬೆಯನ್ನು ಹಸೆಗೆ ಕರೆಯುವಹಾಡು.

ರಾಗ.—ಆನಂದಭೈರವಿ. ಆದಿತಾಳ.

ಚಂದನದ ಮರದಿಂದ | ಲಂದವಾಗಿ ಮಾಡಿರುವ | ಸುಂದರಾಂಗ ರೂಪವನ್ನು | ಪೊಂದಿ ಬಂದಿರುವಿಂದಿರೆಯೆ | ಸುಂದರಿಯೆ | ಕಮಲ | ಮಂದಿರೆಯೆ | ಹಸೆಗೇಳು || ೧ || ಗುಂಡು ಗುಲುಗಂಜಿಯೊಡವೆ | ಗೊಂಡು ದುಂಡುಮಲ್ಲಿಗೆಯ | ಮಂಡೆಯೊಳಾಂತು ಬೇಂಗಡೆಯು | ಕುಂಡಲವ ತಳೆಯುತಾ | ಖಂಡದಯೆ | ವಿನತಾ | ಖಂಡಲೆಯೆ || ಹಸೆಗೇಳು || ೨ || ಗಾಜುಮೇಣ ಬೇಂಗಡೆಗಳಿಂ | ರಾಜಿಪ ರಾಗಟೆ ಬಗುಡಿ | ಪೈಜಣವ ನಾನುತ ನೀ | ರಾಜಿ ಸೀರೆಯುಟ್ಟು ಮುಡಿದು | ಜಾಜಿಯನು | ತೋರುತ | ನೈಜವನು || ಹಸೆಗೇಳು || ೩ || ಮೇಲಾದ ನವರಾತ್ರಿಯೊಳು | ಬಾಲೆಯರೆಲ್ಲರು ಸೇರಿ | ಮೇಲಾಗಿ ಗೈವ ಪೂಜೆಯ | ತಾಳುವ ಗೊಂಬಕ್ಕ ಕರುಣಾ | ಶಾಲಿನಿಯೆ | ಸದ್ಗುಣ | ಮಾಲಿನಿಯೆ || ಹಸಗೇಳು || ೪ || ಹರಿಸದಿಂದ ಬಾಲೆಯರು | ವಿರಚಿಪ ಪೂಜೆಯ ಕೊಂಡು | ಪರಮ ಕರುಣದಿಂದವರಿಗೆ | ವರಗಳ ನೀಯುವ ನರ | ಹರಿಯುರಸಿ | ಸದ್ಗುಣ | ವರಸರಸಿ || ಹಸೆಗೇಳು || ೫ ||

ರಾಗ—ಹಿಂದುಸ್ತಾನಿಕಾಪಿ. ರೂಪಕತಾಳ.

ಸಾರಸಾಭಪಾಣಿಗೆ | ಚಾರುಗುಣನಿಶ್ರೇಣಿಗೆ | ಸಾರ [illegible]ವೆಗೆ | ಶ್ರೀರಮಾದೇವಿಗೆ || ಹೀರದಾರತಿಯಬೇಗ

ನಾರಿಮಣಿಯರೆಲ್ಲರೂ । ಬೆಳಗಿರೆ ॥ ೧ ॥ ಲೋಲಚಿಕುರ ಜಾಲಗೆ । ಬಾಲಸೋಮಫಾಲೆಗೆ । ಪಾಲತಾಮರಾಳಗೆಸು । ಶೀಲೆಗಬ್ಧಿಬಾಲೆಗೆ ॥ ನೀಲದಾರತಿಯ ಬೇಗ । ಬಾಲಕಿಯರೆಲ್ಲರು । ಬೆಳಗಿರೆ ॥ ೨ ॥ ಚಿತ್ತಜಾತಜನನಿಗೆ । ಮತ್ತನಾಗಗಮನೆಗೆ । ಚಿತ್ತರಮಹ ಸಂತೋಷ । ವೆತ್ತು ನೃಹರಿಯರಸಿಗೆ ಮುತ್ತಿನಾರತಿಯ ಬೇಗ । ಮತ್ತಕಾಶಿನಿಯರು ॥ ಬೆಳಗಿರೆ ॥ ೩ ॥

---

## ಮಂಗಳ.

ರಾಗ—ದರ್ಬಾರು. ರೂಪಕತಾಳ.

ಮಂಗಳಂ ಭವತು ತೇ । ಮಂಗಳಾಕೃತೇ ॥ ಪಲ್ಲ ॥ ಸಂಗತ ಮುನಿ । ಪುಂಗವ ಸದ । ಪಾಂಗಧೃತರ । ಥಾಂಗ ಕೃತವು । ತಂಗ ಶೋಕ । ಭಂಗ ಗುಣೋ । ತ್ತುಂಗ ಖಗ ತು । ರಂಗರಂಗ ॥ ೧ ॥ ಶ್ರೀಕರ ಕರು । ಣಾಕರನತ । ಶೋಕಹರ ನಿ । ರಾಕೃತರಿಪು । ಲೋಕ ಕೃಪಾ । ಲೋಕ ಪರಸು । ಧಾಕರ ಮುಖ । ಮಾಕಳತ್ರ ॥ ೨ ॥ ಶ್ರೀಶ ದಯಾ । ವೇಶ ನತಸು । ರೇಶ ಜಗದ । ಧೀಶವಿಮಲ । ದಾಶಾರ್ಹ । ಕಾಶಿಕ ಮುಖ । ನಾಶಕ ರಸ । ಲಾಶಹರಸು ॥ ೩ ॥ ನಂದನಂದ । ನೇಂದುಸುಮುಖ । ವಂದಿತ ಮುನಿ । ವೃಂದಸ್ಮರವ । ವಿಂದ ತತಿಮ । ಳಿಂದಗೋ । ವಿಂದಸದಾ । ನಂದಕಂದ ॥ ೪ ॥ [illegible] ಜಾರಿ । ಹಾರಿದರ । ಸ್ಮೇರ ಸಾರ । ಸಾರ ಚಾರು । ಗೌರದೃಕ್ಸ । [illegible] ನ ತಪ । ದಾರವಿಂದ । ನಾರಸಿಂಹ ॥ ೫ ॥

---

ಸಂಪೂರ್ಣ.

---